# ಲೋಕಮಾನ್ಯ
# ಲೇಡಿ ಒಲೇವ್ ಬೇಡನ್ ಪಾವೆಲ್
# ಜೀವನ ಮತ್ತು ಸಾಧನೆ




ರಾಜ್ಯ ಗೈಡ್ ಕಛೇರಿ
ನಂ. 39, ಶಾಂತಿ ಗೃಹ, ಅರಮನೆ ರಸ್ತೆ,
ಬೆಂಗಳೂರು – 560 001

# ಲೇಡಿ ಅಲೇವ್ ಬೇಡನ್ ಪಾವೆಲ್ ಅವರ ನಲ್ನುಡಿ




ಹೇ ಪ್ರಭು! ಕೊನೆಯುಸಿರಿರುವವರೆಗೂ ನನಗೆ ಕೆಲಸವನ್ನು ಕೊಡು. ಈ ಕೆಲಸವನ್ನು ಮುಗಿಸುವವರೆಗೂ ಬದುಕಲು ಬಿಡು.

"ಗೈಡಿಂಗ್"- ಈ ಉಡುಗೊರೆಯಿಂದ ನಮಗೆ ಬಹಳಷ್ಟು ಸಂತೋಷ ದೊರೆಯುತ್ತದೆ. ಬಹಳಷ್ಟು ಸ್ನೇಹಿತರನ್ನು ಪಡೆಯುತ್ತೇವೆ. ವಿನೋದವು ಸಂಸ್ಥೆಯ ಕೊಟ್ಟು ಕೊಳ್ಳುವ ವ್ಯವಹಾರವಾಗಿದೆ.

ಯುದ್ಧವನ್ನು ಗೆಲ್ಲುವುದಕ್ಕಿಂತಲೂ. ಶಾಂತಿಯನ್ನು ಗೆಲ್ಲುವ ಪ್ರಶ್ನೆ ಅತೀ ಮಹತ್ವವಾದುದು.

ಯಾರು ಅಸಾಧ್ಯವನ್ನು ಸಾಧ್ಯಮಾಡಬಲ್ಲರೋ ಅಂತಹವರನ್ನು ಸ್ವಯಂಸೇವಕರಾಗಿ ತೆಗೆದುಕೊಳ್ಳಿ

ನಾವು ಮಾಡದಿರುವುದು ಏನೂ ಇಲ್ಲ, ನಾವು ಮಾಡಲಾಗದ್ದೂ ಏನೂ ಇಲ್ಲ. ಆದರೆ ಹೀಗೆ ಮಾಡಲು ನಾವು ಶ್ರಮಿಸಬೇಕು.

ನೀವು ಆಗಮಿಸಿದಾಗ ಇದ್ದ ಜಗತ್ತಿಗಿಂತ, ನೀವು ನಿರ್ಗಮಿಸುವಾಗಿನ ಜಗತ್ತನ್ನು ಉತ್ತಮಗೊಳಿಸಿ

# ಲೋಕಮಾನ್ಯ
# ಅಲೇವ್ ಲೇಡಿ ಬೇಡನ್ ಪೋವೆಲ್
# ಜೀವನ ಮತ್ತು ಸಾಧನೆ

ಲೇಖಕರು

**ಎಸ್.ಕೆ. ಪ್ರಭಾ**

ಪ್ರಕಾಶಕರು

**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**

ನಂ 39, ಶಾಂತಿ ಗೃಹ, ಅರಮನೆ ರಸ್ತೆ

ಬೆಂಗಳೂರು–560 001

ಪ್ರಕಾಶಕರು
**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**
ನಂ 39, ಶಾಂತಿ ಗೃಹ, ಅರಮನೆ ರಸ್ತೆ
ಬೆಂಗಳೂರು–560 001

ಮೊದಲನೆಯ ಮುದ್ರಣ : 2011
ಎರಡನೆಯ ಮುದ್ರಣ : 2017
ಮೂರನೇಯ ಮುದ್ರಣ : 2019

**ಬೆಲೆ ರೂ. 30.00/–**

ಮುದ್ರಕರು :
**ತೇಜ್ ಪ್ರಿಂಟ್ ಹೌಸ್,**
ನಂ. 86 ಋಷಿಮನೆ 7ನೇ'ಇ' ಮುಖ್ಯರಸ್ತೆ, 2ನೇ ಹಂತ, ಬಸವೇಶ್ವರನಗರ
ಬೆಂಗಳೂರು – 560 079. ಮೊ: 98450 42209 / 98455 13183

## ಸಂದೇಶ



" ಪ್ರತಿಯೊಬ್ಬ ಯಶಸ್ವಿ ಪುರುಷನ ಹಿಂದೆ ಮಹಿಳೆ ಇರುತ್ತಾಳೆ" ಎಂಬ ನಾಣ್ಣುಡಿ, ಲೋಕಮಾನ್ಯೆ ಅಲೇವ್ ಲೇಡಿ ಬೇಡನ್ ಪಾವೆಲ್ ರವರಿಗೆ ಅಕ್ಷರಶ: ಅನ್ವಯಿಸುತ್ತದೆ. ಅನಾಥರಿಗೆ ಆಶ್ರಯದಾತೆಯಾಗಿ ವಿಶ್ವದ ಅಮ್ಮ ಎನಿಸಿದ ಮದರ್ ತೆರೆಸ್ಸಾ ರವರಂತೆ ಮಕ್ಕಳಲ್ಲಿ ಪರಿಸರ ಪ್ರಜ್ಞೆ, ಜಾತ್ಯತೀತ ಮನೋಭಾವ, ಮನೋಬಲವನ್ನು ಮೂಡಿಸಿ, ಬದುಕಿಗೆ ಅರ್ಥಪೂರ್ಣ ಪಾಠವನ್ನು ಕಲಿಸಿಕೊಡುವ ಸ್ಕೌಟ್-ಗೈಡ್ ಚಳವಳಿಯನ್ನು ಹುಟ್ಟುಹಾಕಿದ ಲಾರ್ಡ್ ಬೇಡನ್ ಪಾವೆಲ್ ರವರಿಗೆ ಬೆನ್ನೆಲುಬಾಗಿ ನಿಂತಿದ್ದ ಅವರ ಪತ್ನಿ, ಲೇಡಿ ಬೆಡನ್ ಪಾವಲ್ ರವರೂ ವಿಶ್ವ ಮಾತೆ ಎನಿಸಿದ್ದಾರೆ.

ಪ್ರಪಂಚದಾದ್ಯಂತ ವ್ಯಾಪಿಸಿರುವ ಏಕೈಕ ಚಳವಳಿ ಎಂದರೆ ಅದು ಸ್ಕೌಟ್ ಮತ್ತು ಗೈಡ್ ಚಳವಳಿ. ಈ ಚಳವಳಿಯ ಧ್ಯೇಯ-ಧೋರಣೆಗಳು, ನೀತಿ-ನಿಯಮಗಳು, ತತ್ವಗಳು ಹಿಂದೆಂದಿಗಿಂತಲೂ ಇಂದು ಪ್ರಸ್ತುತವೆನಿಸಿವೆ. ಅನಿವಾರ್ಯವೆನಿಸಿವೆ.

ಸ್ಕೌಟ್-ಗೈಡ್ ಚಳವಳಿಯಲ್ಲಿ ತೊಡಗಿರುವವರು ಮಾತ್ರವಲ್ಲದೆ ಎಲ್ಲ ಹೆಣ್ಣು ಮಕ್ಕಳು, ಲೇಡಿ ಬೆಡನ್ ಪಾವೆಲ್ ರಂತಹ ದಿಟ್ಟ ಮಹಿಳೆಯ ಜೀವನದ ಪಾಠವನ್ನು ಅರಿಯಬೇಕು. ಅವರ ಸಾಧನೆಗಳ ಸ್ಫೂರ್ತಿ ಪಡೆಯಬೇಕು. ಇಂತಹ ಆದರ್ಶ ಮಹಿಳೆಯ ಬದುಕು ನಮ್ಮ ಎಲ್ಲ ಗೈಡ್ ಮಕ್ಕಳಿಗೆ ಆದರ್ಶವಾಗಬೇಕೆಂಬ ಮಹದಾಸೆಯೊಂದಿಗೆ ಭಾರತ್ ಸ್ಕೌಟ್ ಮತ್ತು ಗೈಡ್ಸ್ ಸಂಸ್ಥೆಯ ಕರ್ನಾಟಕ ರಾಜ್ಯದ ಸ್ಥಾನಿಕ ಆಯುಕ್ತರಾಗಿ, ರಾಜ್ಯ ಗೈಡ್ ಆಯುಕ್ತೆಯಾಗಿ, ಜಂಟಿ ಕಾರ್ಯದರ್ಶಿಯಾಗಿ ಹಲವು ದಶಕಗಳ ಕಾಲ ಚಳವಳಿಗೆ ಮೌಲಿಕ ಸೇವೆ ಸಲ್ಲಿಸಿ, ನಮ್ಮನ್ನು ಅಗಲಿರುವ ಶ್ರೀಮತಿ ಎಸ್.ಕೆ.ಪ್ರಭರವರು ಲೇಡಿ ಬೆಡನ್ ಪಾವೆಲ್ ರವರ ಜೀವನ ಚರಿತ್ರೆಯನ್ನು ಕನ್ನಡ ಭಾಷೆಯಲ್ಲಿ ಒಂದು ಪುಸ್ತಕದ ಮುಖೇನ ಪರಿಚಯಿಸಿದ್ದಾರೆ. ಈ ಮಹಾಮಾತೆಯ

ಬಹುಮುಖ ವ್ಯಕ್ತಿತ್ವವನ್ನು ಸರಳವಾಗಿ, ಎಲ್ಲರಿಗೂ ಅರ್ಥವಾಗುವಂತೆ ದಾಖಲಿಸಿದ್ದಾರೆ. ಈಗ ಆ ಕೃತಿಯ ಮರುಮುದ್ರಣ ಗೊಳ್ಳುತ್ತಿರುವುದು ಸಂತೋಷದ ವಿಚಾರ. ನಮ್ಮ ಗೈಡ್ ಮಕ್ಕಳು ಮಾತ್ರವಲ್ಲ, ಸ್ಕೌಟ್-ಗೈಡ್ ಚಳವಳಿಯಲ್ಲಿ ತೊಡಗಿರುವ ಪ್ರತಿಯೊಬ್ಬರೂ ಈ ಕೃತಿಯನ್ನು ಓದಿ ಅವರ ಆದರ್ಶಗಳನ್ನು ಮೈಗೂಡಿಸಿಕೊಳ್ಳಲು ಅನುಕೂಲವಾಗುವ ನಿಟ್ಟಿನಲ್ಲಿ ಈ ಪುಸ್ತಕ ಉಪಯೋಗಕಾರಿಯಾಗಲೆಂದು ಆಶಿಸುತ್ತೇನೆ.

**ಪಿ.ಜಿ.ಆರ್.ಸಿಂಧ್ಯ**
ರಾಜ್ಯ ಮುಖ್ಯ ಆಯುಕ್ತರು

# ಮುನ್ನುಡಿ



ಹೆಣ್ಣು ಕೇವಲ ಹೆಣ್ಣಲ್ಲ. ಆಕೆ ಪ್ರೀತಿ, ವಾತ್ಸಲ್ಯ, ಸಜ್ಜನಿಕೆ, ಸಹನೆ, ಸಹೃದಯ, ಸೌಂದರ್ಯ, ಸ್ನೇಹ, ಸೇವೆ, ಸರಳತೆ, ನಿಷ್ಠೆ, ತ್ಯಾಗ, ಕಾರುಣ್ಯ, ಕ್ರಿಯಾಶೀಲತೆ, ಉಪಾಕಾರ, ಉದಾರತೆ, ಘನತೆ, ಗೌರವ ಈ ಎಲ್ಲ ಶಬ್ದಗಳ ಮೊತ್ತ!

ಸಹನೆ-ಸದೃಢತೆ (patience and firmness ) ಗಳಲ್ಲಿ ಆಕೆ ಭೂಮಿ, ಸ್ವಚ್ಛತೆ-ಸಂಚಲನತೆ ನಿರಂತರತೆ ಮತ್ತು ಕ್ರಿಯಾಶೀಲತೆ (purity and passage) ಗಳಲ್ಲಿ ಆಕೆ ಜಲ; ನಿರಂತರತೆ ಮತ್ತು ಕ್ರಿಯಾಶೀಲತೆ (continuity and activity) ಗಳಲ್ಲಿ ಆಕೆ ವಾಯು; ತೀಕ್ಷ್ಣತೆ ಮತ್ತು ಉಜ್ವಲತೆ (Sharpness and radiance) ಗಳಲ್ಲಿ ಆಕೆ ಅಗ್ನಿ; ವಿಶಾಲತೆ ಮತ್ತು ಪ್ರಕಾಶತೆ (Magnitude and brightness) ಗಳಲ್ಲಿ ಆಕೆ ಆಕಾಶ. ನಿಸರ್ಗದ ಈ ಅಪೂರ್ವ ಲಕ್ಷಣಗಳನ್ನೆಲ್ಲ ಹೊಂದಿರುವ ಕಾರಣದಿಂದಲೇ ಆಕೆಯನ್ನು ಪ್ರಕೃತಿ ಮಾತೆ ಎನ್ನುವುದು.

ಅಂತಹ ಒಂದು ಲೋಕ ಚೇತನದ ದರ್ಶನ ಈ ಕೃತಿ. ವಿಶ್ವದ ಅನುಪಮ ಚಳವಳಿ ಸ್ಕೌಟ್ ಮತ್ತು ಗೈಡ್ಸ್ ಜನಕರಾದ ಲಾರ್ಡ್ ಬೇಡನ್ ಪಾವೆಲ್ ಮತ್ತು ಲೇಡಿ ಬೇಡನ್ ಪಾವೆಲ್ ಅವರ ಸೇವೆಯನ್ನು ಇಡೀ ಜಗತ್ತು ಎಂದಿಗೂ ಮರೆಯುವಂತಿಲ್ಲ. ಅವರು ಹುಟ್ಟು ಹಾಕಿದ ಆ ಚಳವಳಿಯಷ್ಟು ಬೃಹತ್ತಾಗಿ ಮತ್ತಾವ ಚಳವಳಿಯೂ ಬೆಳೆದಿಲ್ಲ, ಅದಕ್ಕೆ ಹೋಲುವಂತಹ ಇನ್ನೊಂದು ಚಳವಳಿಯಿಲ್ಲ. ಮಕ್ಕಳ ವಿಕಾಸದ ತೊಟ್ಟಿಲು ಅದು.

"ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ" ಎಂದು ಹನ್ನೆರಡನೆಯ ಶತಮಾನದಲ್ಲಿದ್ದ ಜೇಡರ ದಾಸಿಮಯ್ಯ ಎಂಬ ವಚನಕಾರ ಹೇಳಿದ್ದಾನೆ. ಆ ಮಾತಿಗೆ ಒಂದು ಸಾಕ್ಷಿ ಎಂಬಂತೆ ಬೇಡನ್ ಪಾವೆಲ್ ದಂಪತಿಗಳು "ಲೋಕವೇ ನಮ್ಮ ಮನೆ, ಲೋಕದ ಮಕ್ಕಳೇ ನಮ್ಮ ಮಕ್ಕಳು" ಎಂದು ಭಾವಿಸಿ ಲೋಕದ ಸೇವೆ ಸಲ್ಲಿಸಿದವರು.

ಸ್ಕೌಟ್ ಮಕ್ಕಳಿಗೆ ಲಾರ್ಡ್ ಬೇಡನ್ ಪಾವೆಲ್ ಅವರು ಹಿಮಾಲಯವಾದರೆ, ಗೈಡ್ ಮಕ್ಕಳಿಗೆ ಲೇಡಿ ಬೇಡನ್ ಪಾವೆಲ್ ಗಂಗಾನದಿ ಇದ್ದಂತೆ! ಈ ಆದರ್ಶ ಮಹಿಳೆಯ ಬದುಕು ನಮ್ಮ ಗೈಡ್ ಮಕ್ಕಳಿಗೆ ಆದರ್ಶವಾಗಬೇಕೆಂಬ ಆಶಯದಿಂದ ಸೋದರಿ ಎಸ್.ಕೆ. ಪ್ರಭಾ ಅವರು ಸಾಕಷ್ಟು ಉಪಯುಕ್ತ ಮಾಹಿತಿ ಸಂಗ್ರಹಿಸಿ ಈ ಕೃತಿಯನ್ನು ರಚಿಸಿದ್ದಾರೆ. ಬಹುಶಃ ಅಲೇವ್ ಬೇಡನ್ ಪಾವೆಲ್ ಅವರ ಬಗೆಗೆ ತಿಳಿದುಕೊಳ್ಳಬೇಕಾದ ಎಲ್ಲ ಮಹತ್ವದ ವಿಷಯಗಳು ಇಲ್ಲಿವೆ. ಶಿಕ್ಷಣ ಕ್ಷೇತ್ರದಲ್ಲಿ ಸುದೀರ್ಘ ಸೇವೆ ಸಲ್ಲಿಸಿರುವ ಪ್ರಭಾ ಅವರ ಅನುಭವ ಮತ್ತು ಗೈಡ್ ಚಳವಳಿಯಲ್ಲಿ ಅವರಿಗಿರುವ ಶ್ರದ್ಧಾಸಕ್ತಿಗಳಿಂದಾಗಿ ಇಲ್ಲಿನ ಬರಹ ಓದುಗರಿಗೆ ತುಂಬಾ ಆತ್ಮೀಯವಾಗುತ್ತದೆ.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಕರ್ನಾಟಕ ಶಾಖೆ ನಡೆಸುತ್ತಿರುವ ಇಪ್ಪತ್ತಾರನೆಯ ಕರ್ನಾಟಕ ಜಾಂಬೋರೆಟ್ ಮತ್ತು ಗೈಡಿಂಗ್ ಚಳವಳಿಯ ಶತಮಾನೋತ್ಸವ ಸಂದರ್ಭದಲ್ಲಿ ಈ ಕೃತಿ ಪ್ರಕಟವಾಗುತ್ತಿರವುದು ನಿಜಕ್ಕೂ ಸಂದರ್ಭೋಚಿತ ಮತ್ತು ಸಾರ್ಥಕ. ಇಂತಹ ಉಪಯುಕ್ತ ಕೃತಿಯನ್ನು ಶ್ರಮ-ಶ್ರದ್ಧೆಗಳಿಂದ ರಚಿಸಿ, ಗೈಡಿಂಗ್ ಚಳವಳಿಗೆ ಕಾಣಿಕೆಯೆಂಬಂತೆ ಸಲ್ಲಿಸಿರುವ ಸೋದರಿ ಪ್ರಭಾ ಅವರನ್ನು ನಾನು ಅಭಿನಂದಿಸುತ್ತೇನೆ.

ಈ ಚಳವಳಿಯ ಪರಿಧಿಗೆ ನಾಡಿನ ಎಲ್ಲ ಮಕ್ಕಳೂ ಬರಬೇಕೆಂಬ ಹಂಬಲ ಅವರದು. ಚಳವಳಿಯ ಸಂದೇಶ ಪ್ರಸಾರಕ್ಕಾಗಿ ಹೆಚ್ಚಿನ ಪ್ರಮಾಣದಲ್ಲಿ ಸಾಹಿತ್ಯ ಪ್ರಕಟವಾಗಬೇಕೆಂದು ಅವರು ಸದಾ ಹೇಳುತ್ತಿರುತ್ತಾರೆ. ಅವರ ಆಶಯವನ್ನು ಪೂರೈಸುವಲ್ಲಿ ಪ್ರಭಾ ಅವರ ಈ ಕೃತಿ ಕೆಲಮಟ್ಟಿಗಾದರೂ ಯಶಸ್ವಿಯಾಗಿದೆ.

ಅಲೇವ್ ಬೇಡನ್ ಪಾವೆಲ್ ಅವರದು ಉಜ್ವಲ ಜೀವನ; ಉದಾತ್ತ ಜೀವನ; ಬಹುಮುಖ ಪ್ರತಿಭೆಯ ಬೌದ್ಧಿಕ ಜೀವನ. ಅವರ ಬದುಕು ಲೋಕಸೇವೆಗೆ ಬರೆದ ಒಂದು ವ್ಯಾಖ್ಯೆ. ಅವರ ಈ ಜೀವನ ದರ್ಶನ ಕೃತಿಯನ್ನು ನಮ್ಮ ಗೈಡ್ ಮಕ್ಕಳೆಲ್ಲ ಓದಿ ಅವರ ಆದರ್ಶವನ್ನು ಮೈಗೂಡಿಸಿಕೊಳ್ಳುವಂತಾಗಲಿ.

**ಗೊ.ರು.ಚನ್ನಬಸಪ್ಪ**
ಅಧ್ಯಕ್ಷರು, ಪ್ರಕಟಣ ಸಮಿತಿ

## ಪ್ರಸ್ತಾವನೆ



"ಲೋಕಮಾನ್ಯೆ ಅಲೇವ್ ಬೇಡನ್ ಪಾವೆಲ್- ಜೀವನ ಮತ್ತು ಸಾಧನೆ" ಈ ಪುಸ್ತಕವನ್ನು 26ನೇ ಶತಮಾನೋತ್ಸವವನ್ನು ಉದ್ಘಾಟಿಸುವ ಸಂದರ್ಭದಲ್ಲಿ ಬಿಡುಗಡೆ ಮಾಡಲಾಗಿದೆ.

ಈ ಪುಸ್ತಕ ಬರೆಯಲು ಪ್ರೇರಣೆ ನೀಡಿದ್ದು ಅಲೇವ್ ಲೇಡಿ ಬೇಡನ್ ಪಾವೆಲ್‌ರವರು 32ವರ್ಷ ಅಂತರವಿರುವ ಬೇಡನ್ ಪಾವೆಲ್‌ರನ್ನು ಪ್ರೀತಿಸಿ ಮದುವೆಯಾಗಿ ಅನ್ಯೋನ ದಾಂಪತ್ಯ ಜೀವನ ನಡೆಸಿದ್ದು ಹಾಗೂ 1916 ರಿಂದ 1977 ರವರೆಗೆ ಪತಿಯ ಜೊತೆಗೆ ಪತಿಯ ನಂತರ ತನ್ನ ಕೊನೆಯ ದಿನಗಳವರೆಗೂ ನಿರಂತವಾಗಿ ಸ್ಕೌಟ್-ಗೈಡ್ ಚಳವಳಿಯ ಬೆಳವಣಿಗೆ ಮತ್ತು ಅಭಿವೃದ್ಧಿಗಾಗಿ ಶ್ರಮಿಸಿದ್ದು.

ಅಲೇವ್ ಅವರು ಮೇರಿ ಡ್ರಿವರಿ ಎಂಬ ಬರಹಗಾರ್ತಿಗೆ ತಮ್ಮ ಆತ್ಮ ಕಥನವನ್ನು ಹೇಳಿ "Window on my Heart" ಎಂಬ ಪುಸ್ತಕವನ್ನು ಬರೆಸಿದರು. ಈ ಮೂಲ ಪುಸ್ತಕವನ್ನು ಗ್ರಂಥಾಲಯದಲ್ಲಿ ಶೋಧಿಸಿ ಹೊರತೆಗೆದು ನಾನು ಮತ್ತು ನನ್ನ ಸ್ನೇಹಿತೆ ದಿ. ರವಿವೆಸ್ಲಿಯವರು ಓದಿದೆವು. ಅವರ ಬಹುಮುಖ ವಿಶಿಷ್ಟತೆಗಳು - ಮಗಳಾಗಿ, ಹದಿಹರೆಯದವಳಾಗಿ, ಪತ್ನಿಯಾಗಿ, ತಾಯಿಯಾಗಿ, ಮರೆಯಲಾರದ ಅತಿಥೇಯಳಾಗಿ ಚಳವಳಿಯ ನಾಯಕಿಯಾಗಿ, ಹೆಣ್ಣಿನ ಸ್ಥಾನವು ಮನೆಯನ್ನಾಗಿಸಿದ 19ನೇ ಶತಮಾನದಲ್ಲಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಬೇಳೆದ ಅವರ ಬಗ್ಗೆ ವಿಚಾರ ವಿನಿಮಯ ಮಾಡುತ್ತಾ ಚರ್ಚಿಸುತ್ತಾ ಅವರ ಬಗ್ಗೆ ಒಂದು ಪುಸ್ತಕ ಏಕೆ ಬರೆಯಬಾರದು ಎಂಬ ಸಲಹೆ ನೀಡಿದರು, ಬರೆಯಲು ಪ್ರೋತ್ಸಾಹಿಸಿದರು. ಮುಂದೆ ಸಾಗಿ ಅರ ತನ್ನ ನೆನಪಿನ ಸುರುಳಿ ಬಿಚ್ಚಿದರು. 1960ರಲ್ಲಿ ಈಗ ಇರುವ ರಮಣಮಹರ್ಷಿ ಆಶ್ರಮದ ಬಯಲಿನಲ್ಲಿ ರಾಷ್ಟ್ರೀಯ ಜಾಂಬೂರೇಟ್ ನಡೆಯಿತಂತೆ. ಈ ಜಾಂಬೂರಿಯಲ್ಲಿ ಅಲೇವ್ ಬೇಡನ್ ಪಾವೆಲ್ ಭಾಗವಹಿಸಿದ್ದರಂತೆ. ಅದರಲ್ಲಿ

ದಿ. ಲೀಲಾ ಅಂಜನಪ್ಪ, ರಾಜ್ಯ ಆಯುಕ್ತೆಯಾದ ರವಿವೆಸ್ಲಿ ಅವರ ತಾಯಿ ಹ್ಯಾನಮ್ಮ ವೆಸ್ಲಿ ಗೈಡ್ ಶಿಕ್ಷಕಿ ಹಾಗೂ ಸಹಾಯಕ ಆಯುಕ್ತೆ ಮೈಸೂರು ಜಿಲ್ಲೆ, ಉಷಾ ಸರ್ವೇಶ್‌ಕರ್, ಶಾಂತಾಗಿರಿಯಣ್ಣ, ಮೈಥಿಲಿ ಸಂಪತ್, ದಿವಂಗತ ಹಮೀದಾ ರೆಹಮಾನ್ ಮುಂತಾದವರು ಭಾಗವಹಿಸಿದ್ದರಂತೆ. ಅಲೇವ್ ಅವರು ಮಿಂಚಿನಂತೆ ನಗುನಗುತ್ತಾ ಸಂಚರಿಸುತ್ತಿದ್ದರಂತೆ. ಅವರೇ ಮುಖ್ಯ ಆಕರ್ಷಣೆಯಾಗಿದ್ದರಂತೆ. ಆಗ ನಡೆದ ಒಂದು ಘಟನೆ: ಎಲ್ಲಾ ರಾಜ್ಯದವರು ಶಿಬಿರಾಗ್ನಿಗೆ ಅಲೇವ್ ಅವರನ್ನು ಅಹ್ವಾನಿಸಿದರು. ಶಿಬಿರಾಗ್ನಿ ಪ್ರಾರಂಭವಾಗಿ ಮುಕ್ತಾಯಗೊಂಡಿತಂತೆ. ಅಲೇವ್ ಅವರು ಬರಲಿಲ್ಲೆಂದು ಇಲ್ಲರೂ ಮಾತನಾಡುತ್ತಿದ್ದಾಗ ಹಿಂದೆ ಕುಳಿತವರು ಬಂದು ಸ್ವಲ್ಪ ಸಮಯ ಇದ್ದು ಹೋದರೆಂದು ಹೇಳಿದರಂತೆ. ಹೀಗೆ ಸದ್ದಿಲ್ಲದೆ ಎಲ್ಲಾ ಶಿಬಿರಾಗ್ನಿಗೂ ಭೇಟಿ ನೀಡಿದರಂತೆ. ಎಲ್ಲರೊಡನೆ ಸರಳವಾಗಿ ಬೆರೆಯುತ್ತಾ ಮಾತನಾಡುತ್ತಾ ಜಾಂಬೂರಿಯ ಉದ್ದಗಲಕ್ಕೂ ಓಡಾಡಿದರಂತೆ.

16 ಅಕ್ಟೋಬರ್ 1966ರಂದು, 4ನೇ ಅಂತರಾಷ್ಟ್ರೀಯ ಗೈಡ್ ಭವನ ಪೂನಾದಲ್ಲಿ ಉದ್ಘಾಟಿಸಿದರು ಅಲೇವ್ ಬೇಡನ್ ಪಾವೆಲ್ಲರು. ನಗೆ ಮಲ್ಲಿಗೆಯನ್ನು ಬೀರುತ್ತಾಲವಲವಿಕೆಯಿಂದ ಸಮಯಕ್ಕೆ ಸರಿಯಾಗಿ ವೇದಿಕೆಯನ್ನೇರಿದರು. ನಾನಂತು ಅವರನ್ನು ನೋಡುತ್ತಾ ಮೂಕವಿಸ್ಮಿತಳಾದೆ. ಅಲೇವ್ ಅವರು ಕಟ್ಟಡ ಉದ್ಘಾಟಿಸಿ ಚಿಕ್ಕ ಚೊಕ್ಕ ಭಾಷಣ ಮಾಡಿದರು. 'ಈ ಚಳವಳಿ ಬೃಹತ್ ಆಗಿ ಬೆಳೆದು ಮಹಿಳೆಯರನ್ನು ಸಬಲರನ್ನಾಗಿ ಮಾಡಬೇಕಾಗಿದೆ. ನಾವೆಲ್ಲಾ ವಿಶ್ವ ಶಾಂತಿಯನ್ನು ಸ್ಥಾಪಿಸಲು ವಿಶ್ವ ಕುಟುಂಬಿಗಳಾಗಿ ಬೆಳೆಯೋಣ' ಎಂದು ಕರೆ ನೀಡಿದರು. ಅಲೇವ್ ಅವರು ಎಲ್ಲರಿಗೂ ಹಸ್ತಲಾಘವ ನೀಡುತ್ತಾ ಸಾಗಿದರು.

"Window on my Heart" ಈ ಪುಸ್ತಕದ ಜೊತೆ ಅವರ ಬಗೆಗಿನ ಲೇಖನ, ಹಸ್ತಪ್ರತಿಗಳು, ಅಂತರಜಾಲ ಮಾಹಿತಿ ಇತ್ಯದಿಗಳನ್ನು ಸಂಗ್ರಹಿಸಿದೆವು. ಇವುಗಳಲ್ಲಿ ಮಹತ್ವಪೂರ್ಣ ಅಂಶಗಳನ್ನು ಆಯ್ದು ಭಾಷಾಂತರಿಸಿ ಸಂಕಲಿಸಿ ನಿರೂಪಿಸಿ ಈ ಪುಸ್ತಕವನ್ನು ಬರೆಯಲಾಯಿತು. ಹಸ್ತಪ್ರತಿ ಸಿದ್ದವಾಯಿತು. ಮೂಂದೆ ಪ್ರಕಟಣಾ ಸಮಿತಿಯ ಅನುಮತಿ ಪಡೆಯಲಾಯಿತು. ನಂತರ D. T. P ಮಾಡಿಸಿ ಪ್ರಕಟಣಾ ಸಮಿತಿಯ ಅಧ್ಯಕ್ಷರಾದ ಸುಪ್ರಸಿದ್ಧ ಸಾಹಿತಿ ಗೊ.ರು. ಚೆನ್ನಬಸಪ್ಪ ಅವರಿಗೆ ಹಿಂಜರಿಕೆಯಿಂದಲೇ ನೀಡಿದೆ. ಅವರು ಅದನ್ನು ತಿದ್ದಿ 'ಚೆನ್ನಾಗಿದೆ ಪ್ರಕಟಿಸಿ' ಎಂದು ಪ್ರೋತ್ಸಾಹ ನೀಡಿದರು. ಅವರು ನನ್ನ ಬರಹಕ್ಕೆ ನೀಡಿದ ಮಾನ್ಯತೆಗೆ ಸಂತಸವಾಯಿತು.

ಈ ಬರಹವನ್ನು ಹಸ್ತಪ್ರತಿಯ ಪ್ರಾರಂಭದಿಂದ ಆ. ಖಿ. ಕ. ಪ್ರತಿಯವರಿಗೆ ದಿ. ರವಿವೆಸ್ಲಿ, ಶ್ರೀಮತಿಯರಾದ ಬಿ.ಡಿ. ಶಾಂತ, ಎಲ್. ಟಿ. (ಗೈಡ್) ಶ್ರೀಮತಿ ಎಂ. ಜಿ. ಬೋಪಯ್ಯ, ಮಾಜಿ ರಾಜ್ಯ ಆಯುಕ್ತರು (ಗೈಡ್) ದಿ. ಶ್ರೀಮತಿ ಶಾಂತಾಗಿರಿಯಣ್ಣ, ಎಲ್. ಟಿ. (ಗೈಡ್) ಶ್ರೀಮತಿ ನಿರ್ಮಲಾ ಕಲಶೆಟ್ಟಿ, ಎಲ್.ಟಿ. (ಬುಲ್ ಬುಲ್) ಮತ್ತು ಎ.ಎಸ್.ಓ.ಸಿ. ಮುಂತಾದವರು ಓದಿ ಸಲಹೆಗಳನ್ನು ನೀಡಿ ಪ್ರೋತ್ಸಹಿಸಿದರು. ದಿನಾಂಕ: 05–12–2010ರಂದು ವಿಶ್ವ ಗೈಡ್ ಶತಮಾನೋತ್ಸವದ ಅಂಗವಾಗಿ ದೊಡ್ಡಬಳ್ಳಾಪುರದಲ್ಲಿ ಲಾರ್ಡ್ ಮತ್ತು ಲೇಡಿ ಬಿ.ಪಿಯವರ ಜೀವನ ಮತ್ತು ಸಾಧನೆ ಕುರಿತ ಕಾರ್ಯಾಗಾರ ನಡೆಸಿದೆವು. ಇದರಲ್ಲಿ ಈ ಪುಸ್ತಕದ ಕರಡು ಪ್ರತಿಯನ್ನು ಶಿಬಿರಾರ್ಥಿಗಳಿಗೆ ನೀಡಿ ಓದಿಸಲಾಯಿತು. ನಂತರ ಮುದ್ರಣಕ್ಕೆ ನೀಡಲಾಯಿತು.

ಈ ಪುಸ್ತಕ ಪ್ರಕಟವಾಗಲು ಪ್ರೋತ್ಸಾಹಿಸಿ ಸಂಸ್ಥೆಯ ವತಿಯಿಂದ ಸಹಕರಿಸಿ, ಪ್ರೋತ್ಸಹಿಸಿದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ಶ್ರೀಮತಿ ಶಾಂತಾ ವಿ. ಆಚಾರ್ಯ ಉಪಾಧ್ಯಕ್ಷರು (ಗೈಡ್), ಶ್ರೀಮತಿ ಜಾನಕಿ ವೇಣುಗೋಪಾಲ್, ರಾಜ್ಯ ಸಂಘಟನಾ ಆಯುಕ್ತೆ (ಗೈಡ್) ಮತ್ತು ಶ್ರೀಮತಿ ಕೆ. ಕೆ. ಲೀಲಾ, ರಾಜ್ಯ ತರಬೇತಿ ಆಯುಕ್ತೆ (ಗೈಡ್) ಇವರುಗಳಿಗೆ ಆಭಾರಿಯಾಗಿದ್ದೇನೆ.

ಗೈಡರ್ಸ್ ಮತ್ತು ಗೈಡ್ಸ್‌ಗಳು ಹಾಗೂ ಮಹಿಳೆಯರು ಈ ಪುಸ್ತಕವನ್ನು ಓದಿ ಉತ್ತಮ ಜೀವನ ಮತ್ತು ಸಾಧನೆಗೆ ಸ್ಫೂರ್ತಿ ಪಡೆಯುವರೆಂದು ನಂಬಿದ್ದೇವೆ. ಮೆಚ್ಚುವರೆಂದು ನಂಬಿದ್ದೇವೆ.

**ಭಾರತದ ಗೈಡಿಂಗ್‌ನ 100 ವರ್ಷಗಳಿಗೆ**
**ಹಾರ್ದಿಕ ಶುಭಾಶಯಗಳು.**

ಎಸ್. ಕೆ. ಪ್ರಭಾ, ಎಲ್.ಟಿ. (ಗೈಡ್)
ನಿವೃತ್ತ ಶಿಕ್ಷಣ ಅಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಕರ್ನಾಟಕ, ರಾಜ್ಯ ಸ್ಥಾನಿಕ ಆಯುಕ್ತರು, ತರಬೇತಿ (ಗೈಡ್), ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್,
ಬೆಂಗಳೂರು.

## ಒಳಪುಟಗಳಲ್ಲಿ

# ಸ್ಮೃತಿ : 1

## ಲೋಕಮಾನ್ಯೆ – ಅಲೇವ್ ಬೇಡನ್ ಪೋವೆಲ್

19 ಮತ್ತು 20ನೇ ಶತಮಾನದಲ್ಲಿ ಆಗಿಹೋದ ಜಗತ್ಪ್ರಸಿದ್ಧ ಮಹಿಳೆಯರಲ್ಲಿ 'ಅಲೇವ್ ಬೇಡನ್ ಪಾವೆಲ್ಲರು ಒಬ್ಬರು. ವಿಶ್ವದೆಲ್ಲೆಡೆ ಮಹಿಳೆಯ ಸ್ಥಾನ ಮನೆಗೆ ಸೀಮಿತವಾಗಿದ್ದಾಗ ಅಂತಾರಾಷ್ಟ್ರೀಯ ಮಟ್ಟದಲ್ಲಿ ಸ್ಕೌಟ್-ಗೈಡ್ಸ್ ಚಳವಳಿಯನ್ನು ಬೆಳೆಸಿ ಈ ವಿಶ್ವಕುಟುಂಬದ ಮಾತೆಯಾಗಿ ಲೋಕಮಾನ್ಯರಾಗಿದ್ದಾರೆ. ವಿಶ್ವದಲ್ಲಿ ಲಕ್ಷಾಂತರ ಯುವಜನರು ಅವರನ್ನು ಪ್ರೀತಿಯಿಂದ ಅಂದು 'ಮದರ್ ಆಫ್ ಮಿಲಿಯನ್ ಎಂದು ಕರೆದರು. ಇಂದಿಗೂ ನಾವೆಲ್ಲರೂ ಹಾಗೆಯೇ ಕರೆಯುತ್ತಿದ್ದೇವೆ. ಅಲೇವ್ ಅವರು ಭೌತಿಕವಾಗಿ ಇತಿಹಾಸದ ಗರ್ಭವನ್ನು ಸೇರಿದ್ದರೂ ಅವರ ಮೌಲ್ಯಗಳು ಇಂದಿಗೂ ಬೆಳಕನ್ನು ನೀಡುವ ಆದರ್ಶ ಜ್ಯೋತಿಗಳಾಗಿ ಬೆಳಗುತ್ತಿವೆ. ಅವರು ಓರ್ವ ವ್ಯಕ್ತಿಯಲ್ಲ ಶಕ್ತಿ!

ಅಲೇವ್ ಅವರದು ಎತ್ತರದ ನಿಲುವು, ಸದಾ ಹಸನ್ಮುಖದಿಂದ ಕೂಡಿದ ಸುಂದರವಾದ ಮುಖಾರವಿಂದ. ಲವಲವಿಕೆಯೇ ಸಾಕಾರಗೊಂಡಂತೆ ಬಾಲ್ಯದಿಂದ ವೃದ್ಧಾಪ್ಯದವರೆಗೂ ತಮ್ಮ ವ್ಯಕ್ತಿತ್ವವನ್ನು ಕಾಪಾಡಿಕೊಂಡಿದ್ದರು. ಅವರ ಶಿಸ್ತು, ಸಮವಸ್ತ್ರದ ಅಚ್ಚುಕಟ್ಟುತನ, ಮಾತಿನಲ್ಲಿ ತುಂಬಿ ತುಳುಕುತ್ತಿದ್ದ ಸ್ನೇಹ, ಪ್ರೀತಿ, ಕಾಳಜಿ, ಪ್ರಶಾಂತತೆ ಎಂತಹವರನ್ನೂ ಆಕರ್ಷಿಸುತ್ತಿತ್ತು. ಅವರು ವಿಶ್ವದ ಯುವಜನಾಂಗಕ್ಕಾಗಿ ಶ್ರಮಿಸುತ್ತಾ ವಿಶ್ವಮಾತೆಯಾಗಿ ಬೆಳೆದರು.

ಅಲೇವ್ ಅವರು ಸ್ಕೌಟ್-ಗೈಡ್‌ಗೆ ಮಾತ್ರ ಸೇವೆ ಸಲ್ಲಿಸಲಿಲ್ಲ. ಅವರು ದಕ್ಷಿಣ ಆಫ್ರಿಕಾದ ಮಹಿಳೆಯರನ್ನು ಶೋಷಣೆಯಿಂದ ಮುಕ್ತರನ್ನಾಗಿ ಮಾಡಲು ಹೋರಾಡಿದರು. ಜೊತೆಗೆ ಚಾಚು ತಪ್ಪದೆ ತಮ್ಮ ಕೌಟುಂಬಿಕ ಧರ್ಮವನ್ನು ಪಾಲಿಸಿದರು. ಪತಿ ಬೇಡನ್ ಪೋವೆಲ್‌ರಿಗೆ ಅಚ್ಚುಮೆಚ್ಚಿನ ಅತ್ಯಮೂಲ್ಯ ಪತ್ನಿಯಾಗಿ, ಮಕ್ಕಳಿಗೆ ಹೆಮ್ಮೆಯ ತಾಯಿಯಾಗಿ, ಬಂಧುಗಳಿಗೆ ನೆಚ್ಚಿನ ಮೆಚ್ಚಿನ ಬಂಧುವಾಗಿ, ಅತಿಥಿಗಳಿಗೆ ಮರೆಯಲಾಗದ

ಅತಿಥೇಯರಾಗಿ ಸಾರ್ಥಕ ಬದುಕನ್ನು ನಡೆಸಿದರು. ಇವರನ್ನು ನಮ್ಮ ಯುವಜನಾಂಗವು ಅನುಸರಿಸಿದರೆ ಮನೆಮನೆಯೂ ಸ್ವರ್ಗವಾದೀತು! ಆ ಮೂಲಕ ಭೂಮಿಯೂ ಸ್ವರ್ಗವಾದೀತು! ಅಲೇವ್ ಅವರು ತಮ್ಮ ಪತಿಯ ಜೊತೆ ಸರಿಸಮನಾಗಿ, ಅವರ ನಂತರವೂ ಚಳವಳಿಗಾಗಿ ದುಡಿದರು. ಅಂತರ ರಾಷ್ಟ್ರೀಯ ಮಹಿಳಾ ವರ್ಷದ ಉದ್ದೇಶವಾದ 'ಸಮಾನತೆ, ಪ್ರಗತಿ ಮತ್ತು ಶಾಂತಿಯನ್ನು ವಿಶೇಷವಾಗಿ ಹೆಣ್ಣುಮಕ್ಕಳಲ್ಲಿ ಮತ್ತು ಮಹಿಳೆಯರಲ್ಲಿ ಪ್ರಸಾರ ಮಾಡಲು ಶ್ರಮಿಸಿದ ಇವರನ್ನು ಸ್ಮರಿಸುತ್ತಾ ಕೃತಜ್ಞತೆಗಳನ್ನು ಅರ್ಪಿಸಲು ಮಹಿಳಾ ದಿನಾಚರಣೆ ಒಂದು ಸುಸಂದರ್ಭವಾಗಿದೆ' ಎಂದು ಅವರ ಆತ್ಮೀಯರಾದ ಎಲಿಜಬೆತ್ ಹಾರ್ಟ್ಲಿಯವರು ಅಭಿಪ್ರಾಯಪಟ್ಟಿದ್ದಾರೆ ಎಲ್ಲರಂತೆ ಅವರೂ ಜೀವನದಲ್ಲಿ ಕಷ್ಟಗಳನ್ನೂ, ಸಮಸ್ಯೆಗಳನ್ನೂ ಎದುರಿಸಿದರು. ಆದರೆ ಯಾವುದೇ ಸಂದರ್ಭದಲ್ಲೂ ಮಾನಸಿಕ ಸಮತೋಲನವನ್ನು ಕಳೆದುಕೊಳ್ಳದೆ, ಭಾವೋದ್ವೇಗಕ್ಕೆ ಒಳಗಾಗದೆ ವಿವೇಚನೆಯಿಂದ ನಿರ್ಣಯಗಳನ್ನು ಕೈಗೊಂಡರು. ಅವರು ವಿಶ್ವಕ್ಕೆ ಸಲ್ಲಿಸಿದ ಅನನ್ಯ ಸೇವೆಯಿಂದಾಗಿ ಇಂದಿಗೂ ನಮ್ಮೊಡನೆ ಮಾತೃಸ್ವರೂಪಿಣಿಯಾಗಿ ಜೀವಂತವಾಗಿದ್ದಾರೆ.

## ಸ್ಮೃತಿ : 2

## ಅಲೇವ್ ಅವರ ತಂದೆ-ಹೆರಾಲ್ಡ್ ಸೋಮ್ಸ್



ತಂದೆ ಹೆರಾಲ್ಡ್ ಸೋಮ್ಸ್ ಅವರದು ಶ್ರೀಮಂತ ಕುಟುಂಬ. ಅವರು ಕಷಾಯ ಭಟ್ಟಿ ಇಳಿಸುವ (brewary) ಕಾರ್ಖಾನೆಯನ್ನು ಇಟ್ಟಿದ್ದರು. ಅವರು ಕ್ಯಾತರಿನ್ ಎಂಬ ಸುಂದರವಾದ ಯುವತಿಯನ್ನು ವಿವಾಹವಾದರು. ಅವರಿಗೆ ಮೂರು ಮಕ್ಕಳಾದವು. ಆಥರ್ ಗ್ರಾನ್‌ವಿಲ್, ಎಡಿತ್ ಆರಿಯಲ್ ಮತ್ತು ಅಲೇವ್ ಸೇಂಟ್ ಕ್ಲೇರ್ ಸೋಮ್ಸ್.

ಹೆರಾಲ್ಡ್ ನಾರ್ವೇಜಿಯನ್ ದೊರೆಯು 'ಅಲಾಫ್' ಅವರನ್ನು ಬಹಳವಾಗಿ ಮೆಚ್ಚಿಕೊಂಡಿದ್ದರು. ಗಂಡು ಮಗುವಾದರೆ ಅಲಾಫ್ ಎಂದು ಹೆಸರಿಡಬೇಕೆಂದಿದ್ದರು. ಆದರೆ ಹುಟ್ಟಿದ್ದು ಹೆಣ್ಣು ಮಗು. ಆದ್ದರಿಂದ ಅವಳಿಗೆ 'ಅಲೇವ್' ಎಂದು ಅಲಾಫ್‌ನ ಹೆಸರನ್ನು ರೂಪಾಂತರಿಸಿ ನಾಮಕರಣ ಮಾಡಿದರು. ಮಗು ಹೆಣ್ಣು ಆದರೆ ಏನಂತೆ, ಅಲೇವ್ ಕೂಡ ಇತಿಹಾಸದ ಪುಟಗಳಲ್ಲಿ ಅವರ ಇಚ್ಛೆಯಂತೆ ಅಮರಳಾದಳು! ಹೆರಾಲ್ಡ್‌ರವರು ಶ್ರೀಮಂತವಾದ ವಿಶೇಷರೀತಿಯ ಜೀವನವನ್ನು ನಡೆಸಿದ್ದರು. ಒಂದಕ್ಕಿಂತ ಒಂದು ಸುಂದರವಾದ ಮನೆಯನ್ನು ಹುಡುಕುತ್ತಾ ಬದಲಾಯಿಸುವುದು ಅವರ ಒಂದು ಹವ್ಯಾಸವಾಗಿತ್ತು. ಒಂಭತ್ತು ವರ್ಷಗಳಲ್ಲಿ ಆರು ಬಾರಿ ಮನೆಯನ್ನು ಬದಲಾಯಿಸಿದರು. ಮನೆಯನ್ನು ಬದಲಾಯಿಸುವಾಗ ಕುಟುಂಬದವರೊಡನೆ ಕೆಲಸಗಾರರು, ಕೋಳಿಗಳು, ನಾಯಿಗಳು ಮತ್ತು ಕುದುರೆಗಳನ್ನೊಳಗೊಂಡ ದೊಡ್ಡ ಸಂಸಾರವೇ ಹೊರಡುತ್ತಿತ್ತು.

ಅವರಿಗೆ ಚಿತ್ರ ಬಿಡಿಸಿ ಬಣ್ಣ ತುಂಬುವ ಹವ್ಯಾಸವಿತ್ತು. ಅದಕ್ಕಾಗಿ ಸುಂದರ ಪ್ರಕೃತಿಯನ್ನು ಅರಸುತ್ತಾ ಬೇರೆ ಬೇರೆ ಊರುಗಳಿಗೆ ಸಮುದ್ರದಾಚೆ

ಪ್ರಯಾಣ ಮಾಡುತ್ತಿದ್ದರು. ಕೆಲವೊಮ್ಮೆ ಹವಾ ಬದಲಾವಣೆಗಾಗಿ ಪ್ರವಾಸ ಮಾಡುತ್ತಿದ್ದರು. ಅವರಿಗೆ ಪ್ರವಾಸವೆಂದರೆ ಬಲು ಇಷ್ಟ. ಕಿರಿಯ ಮಗಳಾದ ಅಲೇವಳನ್ನು ತಪ್ಪದೇ ಜೊತೆಗೆ ಕರೆದುಕೊಂಡು ಹೋಗುತ್ತಿದ್ದರು. ಪ್ರವಾಸದ ಹವ್ಯಾಸ ಅಲೇವ್ ಅವರಿಗೆ ಸ್ಕೌಟ್-ಗೈಡ್ ಚಳವಳಿಯ ಪ್ರಸಾರಕ್ಕಾಗಿ ವಿಶ್ವದ ಉದ್ದಗಲಕ್ಕೂ ಅವಿರತವಾಗಿ ಪ್ರವಾಸ ಮಾಡಲು ಚೇತನ ನೀಡಿತು. ಹೆರಾಲ್ಡ್‌ರವರು ಸುಸಂಸ್ಕೃತರು, ವಿನೋದಪ್ರಿಯರು, ಸೌಂದರ್ಯೋಪಾಸಕರು, ಪ್ರಕೃತಿ ಪ್ರೇಮಿಯೂ ಆಗಿದ್ದರು. ಈ ಎಲ್ಲಾ ಸದ್ಗುಣಗಳು ಅಲೇವ್‌ಳಲ್ಲೂ ಬೆಳೆದವು.

ಜ್ಞಾನದಾಹಿಯಾದ ಹೆರಾಲ್ಡ್ ಅಪಾರ ಜ್ಞಾನವನ್ನು ಸಂಪಾದಿಸಿದ್ದರು. ತಾವು ಗಳಿಸಿದ ಜ್ಞಾನವನ್ನು ಇತರರೊಡನೆ ಹಂಚಿಕೊಳ್ಳುವುದರಲ್ಲಿ ಅವರಿಗೆ ಅಪಾರ ಆಸಕ್ತಿ ಇತ್ತು. ಅವರು ತಮ್ಮ ವಿಶಿಷ್ಟತೆ ಮತ್ತು ಸ್ವಂತಿಕೆಯಿಂದಾಗಿ ಎಲ್ಲರಿಗೂ ಬೇಗನೆ ಸಂಗಾತಿಯಾಗುತ್ತಿದ್ದರು. ಇದೆಲ್ಲದರ ಜೊತೆಗೆ ಬಂದೂಕಿನಿಂದ ಗುರಿ ಇಡುವ (ಬೇಟೆಯಾಡುವ) ಹವ್ಯಾಸವೂ ಅವರದಾಗಿತ್ತು. ಉತ್ತಮವಾದ ಬೇಟೆಗಾರರಾಗಿದ್ದರು. ಸುಂದರವಾದ ತೋಟವನ್ನು ಮನೆಯ ಸುತ್ತಲೂ ಬೆಳೆಸುವುದರಲ್ಲಿ ಅವರಿಗೆ ಹೆಚ್ಚಿನ ಆನಂದ ಸಿಗುತ್ತಿತ್ತು. ಅವರೊಂದು ಉತ್ತಮ ಚಾರಿತ್ರ್ಯವುಳ್ಳ ಸಂಕೀರ್ಣ ವ್ಯಕ್ತಿಯಾಗಿದ್ದರು. ಒಳ್ಳೆಯ ವಿಮರ್ಶಕರಾಗಿದ್ದರು ಹಾಗೂ ಸಂವೇದನಾಶೀಲ ವ್ಯಕ್ತಿತ್ವವನ್ನು ಹೊಂದಿದ್ದರು. 'ಹೆರಾಲ್ಡ್ ಓದಿದ್ದು ಕೇಂಬ್ರಿಡ್ಜ್‌ನಲ್ಲಿ, ಅವರು ಲವಲವಿಕೆಯಿಂದ ಕೂಡಿದ ಲಘು ಮನಸ್ಸಿನ ಸಂತಸ ಪ್ರವೃತ್ತಿಯುಳ್ಳ ವ್ಯಕ್ತಿಯಾಗಿದ್ದರು. ಅವರ ಭೇಟಿಗಳು, ಪ್ರವಾಸಗಳು ವ್ಯವಹಾರವನ್ನು ಮಾಡುವುದಕ್ಕಿಂತ ಮಂಜಿನ ಹನಿಯನ್ನು ವೀಕ್ಷಿಸುವುದಕ್ಕೆ ಆದ್ಯತೆ ನೀಡುತ್ತಿದ್ದರು' ಎಂದು ಅವರ ಪತ್ನಿಯವರು ದಿನಚರಿಯಲ್ಲಿ ಬರೆದಿದ್ದಾರೆ. ಇದರ ಅರ್ಥ ಅವರು ಪ್ರಕೃತಿಯ ಸೌಂದರ್ಯೋಪಾಸಕರಾಗಿದ್ದರು. ಕೆಲವು ವರ್ಷಗಳ ನಂತರ ತಮ್ಮ ವ್ಯವಹಾರವನ್ನು ನೋಡಿಕೊಳ್ಳಲು ಕಂಪನಿಯನ್ನು ಮಾರಿದರು. ನಂತರ ತಮ್ಮ ಇಷ್ಟಬಂದಂತೆ ದಿನಕಳೆಯಲಾರಂಭಿಸಿದರು. 'ಹೆರಾಲ್ಡ್‌ರವರು ಭೂಮಿಯ ಮೇಲೆ ಸ್ವರ್ಗವನ್ನು ಹುಡುಕುತ್ತಾ ವ್ಯಾಪಕವಾಗಿ

ಪ್ರವಾಸ ಮಾಡಲಾರಂಭಿಸಿದರು' ಎಂದು ಅವರ ಪತ್ನಿ ತಮ್ಮ ದಿನಚರಿಯಲ್ಲಿ ಬರೆದಿದ್ದಾರೆ.

"ಹೆರಾಲ್ಡ್ ಊಟೋಪಚಾರಗಳ ವಿಚಾರದಲ್ಲಿ ಅತಿ ಎನಿಸುವಷ್ಟು ಕಾಳಜಿ ಮಾಡುತ್ತಿದ್ದರು. ಕೆಲವೊಮ್ಮೆ ಗದ್ದಲ ಮಾಡಿ, ಗೊಂದಲವೆಬ್ಬಿಸುತ್ತಿದ್ದರು. ಒಂದು ನಿಮಿಷ ವ್ಯತ್ಯಾಸವಾದರೆ ಊಟವನ್ನೇ ಬಿಟ್ಟು ಎದ್ದುಬಿಡುತ್ತಿದ್ದರು'ಎಂದು ಕ್ಯಾತರಿನ್ ಅವರ ಬಗ್ಗೆ ಹೇಳುತ್ತಿದ್ದರು. 'ನಾನು ತಂದೆಯವರೊಡನೆ ಹೆಚ್ಚು ಸಮಯ ಕಳೆಯುತ್ತಿದ್ದೆ. ತಂದೆ ನನ್ನನ್ನು ಗೊಂಬೆಯಂತೆ ಕುಣಿಸುತ್ತಿದ್ದರು. ಆದರೂ ನನಗೆ ಅವರು ತುಂಬಾ ಒಳ್ಳೆಯ ಸಂಗಾತಿಯಾಗಿದ್ದರು' ಎಂದು ಅಲೇವ್ ಹೇಳುತ್ತಿದ್ದರು.

## ಸ್ಮೃತಿ : 3

## ಅಲೇವ್ ಅವರ ತಾಯಿ – ಕ್ಯಾತರಿನ್



ತಾಯಿ ಕ್ಯಾತರಿನ್ ಸೋಮ್ಸ್ ಈ ಮೊದಲೇ ಹೇಳಿದಂತೆ ಸುಂದರವಾದ ಯುವತಿ. ಅವರು ಶ್ರೀಮಂತ ಕುಟುಂಬದ ಶಿಸ್ತಿನ ಗೃಹಿಣಿಯಾಗಿದ್ದರು. ಒಳ್ಳೆಯ ಶಿಷ್ಟಾಚಾರವನ್ನು ಹೊಂದಿದ್ದರು. ಅವರು ಉಡಿಗೆ–ತೊಡುಗೆಗಳನ್ನು ಧರಿಸುವುದರಲ್ಲಿ ವಿಶಿಷ್ಟ ಘನತೆ (dress code) ಹೊಂದಿದ್ದರು. ಸಂದರ್ಭಕ್ಕೆ ತಕ್ಕಂತೆ ಅಲಂಕರಿಸಿಕೊಳ್ಳುತ್ತಿದ್ದರು. ಉದಾಹರಣೆಗೆ ತೋಟಕ್ಕೆ ಹೋಗಿ ಮಾಲಿಯನ್ನು ಭೇಟಿಯಾಗುವ ಸಂದರ್ಭದಲ್ಲಿ ದೊಡ್ಡದಾದ ಚಿತ್ತಾರದ ಟೋಪಿಯನ್ನು ಧರಿಸುತ್ತಿದ್ದರು. ಕೈಗೆ ಕೈಚೀಲಗಳನ್ನು ಹಾಕಿಕೊಳ್ಳುವುದನ್ನು ಮರೆಯುತ್ತಿರಲಿಲ್ಲ. ತಾಯಿಯನ್ನು ಗಮನಿಸುತ್ತಿದ್ದ ಅಲೇವ್ 'ನಾನು ಅವರ ಮಗಳೇ ಆದರೂ ಮನೋಭಾವ ಮತ್ತು ಉಡಿಗೆ–ತೊಡುಗೆಗಳಲ್ಲಿ ಎಷ್ಟು ಭಿನ್ನವಾಗಿದ್ದೇವೆ' ಎಂದು ಮನದಲ್ಲೇ ಅಚ್ಚರಿಪಡುತ್ತಿದ್ದಳು.

ಕ್ಯಾತರಿನ್ ಸುಂದರವಾದ ಕಸೂತಿ ಹಾಕುತ್ತಿದ್ದರಂತೆ. ಜೊತೆಗೆ ಒಳ್ಳೆಯ ಹೆಣಿಗೆಯನ್ನು ಹೆಣೆಯುತ್ತಿದ್ದರಂತೆ. ಸ್ನೇಹಿತೆಯರಿಗೆ ಕಸೂತಿ ವಸ್ತ್ರ ಮತ್ತು ಹೆಣಿಗೆಗಳನ್ನು ಉಡುಗೊರೆಯಾಗಿ ನೀಡುತ್ತಿದ್ದರಂತೆ. ಒಮ್ಮೆ ತಮ್ಮ ಗೆಳತಿಯೊಡನೆ ಮಾತನಾಡುತ್ತಾ 'ಕಸೂತಿ ನನಗೆ ಆಂತರಿಕ ಶಾಂತಿಯನ್ನು (internal peace) ನೀಡುತ್ತದೆ' ಎಂದು ಹೇಳುತ್ತಿದ್ದರಂತೆ. ಈ ಮಾತನ್ನು ಕೇಳಿಸಿಕೊಂಡ ಪುಟ್ಟ ಅಲೇವ್ ಎಲ್ಲಿ ಕಸೂತಿ ಹೆಣಿಗೆಗಳನ್ನು ನೋಡಿದರೂ 'ಆಂತರಿಕ ಶಾಂತಿ–internal peace' ಎಂದೇ ಕರೆಯಲಾರಂಭಿಸಿದಳಂತೆ.

ಕ್ಯಾತರಿನ್ ಮಕ್ಕಳನ್ನು ಉತ್ತಮ ರೀತಿಯಲ್ಲಿ ಬೆಳೆಸಿದರು. ಆ ಕಾಲದಲ್ಲಿ, ಅವರ ಸಮಾಜದಲ್ಲಿ, ವರ್ಗಬೇಧವಿದ್ದುದರಿಂದ ಶ್ರೀಮಂತರ ಮಕ್ಕಳನ್ನು ಸಾಮಾನ್ಯರ ಜೊತೆಗೆ ಶಾಲೆಗೆ ಕಳುಹಿಸುತ್ತಿರಲಿಲ್ಲ. ಬದಲಿಗೆ ಮನೆಯಲ್ಲೇ ಶಾಲೆ ನಡೆಸುತ್ತಿದ್ದರು. ಇದಕ್ಕಾಗಿ ಶಿಕ್ಷಕ ನಿರ್ವಾಹಕರನ್ನು (governess) ನೇಮಕ ಮಾಡಿಕೊಳ್ಳುತ್ತಿದ್ದರು. ಸುಮಾರು 100 ವರ್ಷಗಳ ಹಿಂದೆ ಅಲೇವ್‌ಳ ತಾಯಿ "Education is not to make learn, but to make wish to learn in a wider sphere of self interest" - "ಶಿಕ್ಷಣ ಕಲಿಸುವುದಿಲ್ಲ, ತಮ್ಮ ಆಸಕ್ತಿಗೆ ಅನುಗುಣವಾಗಿ ಮುಕ್ತ ಸನ್ನಿವೇಶದಲ್ಲಿ ಸ್ವಯಂ ಪ್ರೇರಣೆಯಿಂದ ಕಲಿಯುವಂತೆ ಮಾಡುವುದು' ಎನ್ನುತ್ತಿದ್ದರಂತೆ. ಆ ತಾಯಿಯ ಅಂದಿನ ಶಿಕ್ಷಣದ ಈ ಪರಿಕಲ್ಪನೆ ಇಂದಿನ ಶಿಕ್ಷಣದ ಪರಿಕಲ್ಪನೆ. 'ಶಿಕ್ಷಣ ಕೇವಲ ಕಲಿಸುವುದಲ್ಲ, ಅವರವರ ಆಸಕ್ತಿಗೆ ತಕ್ಕಂತೆ ಕಲಿಯುವಂತೆ ಪ್ರೇರೇಪಿಸುವುದಾಗಿದೆ.'

ಅಲೇವ್ ಅವರ ತಂದೆ ಅವಳಿಗೆ 12 ವರ್ಷವಾಗುತ್ತಿದ್ದಂತೆ ಶಿಕ್ಷಣವನ್ನು ನಿಲ್ಲಿಸಿದರು. ತಾಯಿ, ಮಕ್ಕಳಿಗೆ 'ಜೀವನ ಶಿಕ್ಷಣ'ವನ್ನು ಪ್ರಾರಂಭಿಸಿದರು. ತಾವು ನಡೆಸುತ್ತಿದ್ದ ಕುಕ್ಕುಟಾಗಾರವನ್ನು ಆರಿಯಲ್ ಮತ್ತು ಅಲೇವ್‌ಗೆ ವಹಿಸಿದರು. ಸಮರ್ಥವಾಗಿ ನಡೆಸಲು ಮಾರ್ಗದರ್ಶನ ನೀಡಿದರು. ಸೋದರಿಯರು ಕೋಳಿಗೆ ಬೇಕಾದ ಆಹಾರ ಕೊಂಡು ತರುವುದು, ಆಹಾರ ಹಾಕುವುದು, ಗೂಡನ್ನು ಸ್ವಚ್ಛ ಮಾಡುವುದು, ಮೊಟ್ಟೆ ಸಂಗ್ರಹಿಸುವುದು, ಮರಿ ಮಾಡಿಸುವುದು ಹೀಗೆ ಎಲ್ಲಾ ಕೆಲಸಗಳನ್ನು ಸ್ವತಃ ಮಾಡುತ್ತಿದ್ದರು. ವ್ಯವಹಾರ ವ್ಯವಹಾರವೇ. ಆ ಸೋದರಿಯರಿಂದ ಮೊಟ್ಟೆ ಕೊಂಡು ತಾಯಿ ಹಣ ಕೊಡುತ್ತಿದ್ದರು. ಅವರ ಶಿಕ್ಷಣದಲ್ಲಿ ಗಣಿತ ಮತ್ತು ವಿಜ್ಞಾನದ ಕೊರತೆ ಇತ್ತಂತೆ. ಆದ್ದರಿಂದ ಅಲೇವ್ 'ಕುಕ್ಕುಟಾಗಾರವನ್ನು ನಡೆಸುತ್ತಾ ನಾನು ಗಣಿತವನ್ನು ಕಲಿತೆ' ಎನ್ನುತ್ತಾಳೆ. ಈ ರೀತಿ ಮಕ್ಕಳಿಗೆ ಜವಾಬ್ದಾರಿ ವಹಿಸುವುದರ ಮೂಲಕ ಜೀವನ ಶಿಕ್ಷಣವನ್ನು ಕಲಿಸುವ ತಂತ್ರವನ್ನು

ಇಂದಿನ ತಾಯಿಯರು ಬಳಸಬೇಕಾಗಿದೆ. ದಕ್ಷಿಣ ಆಫ್ರಿಕಾದ ಹೆಮ್ಮೆಯ ನಗರ–ಮೇಫ್‌ಕಿಂಗ್‌ನಲ್ಲಿ ಬಿಳಿಯರು ಮತ್ತು ಕರಿಯರು ನೆಲೆಸಿದ್ದರು. ಬಿಳಿಯರಿಗೆ ಗುಡ್ಡಗಾಡಿನ ಜನಾಂಗವಾದ ಬೊಯರ್ಸ್ ಆಗಾಗ್ಗೆ ಧಾಳಿ ಮಾಡಿ ಕಿರುಕುಳ ಕೊಡುತ್ತಿದ್ದರು. ಬ್ರಿಟಿಷರು 1889ರಲ್ಲಿ ಬೇಡನ್ ಪೊವೆಲ್‌ರ ನಾಯಕತ್ವದಲ್ಲಿ ಬೋಯರ್ಸ್ ಮೇಲೆ ಯುದ್ಧ ಸಾರಿದರು.

ಈ ಯುದ್ಧದ ವಿಶೇಷವೆಂದರೆ ಬಾಯ್ಸ್ ಸ್ಕೌಟಿಂಗ್‌ಗೆ ನಾಂದಿಯಾದ "ಬಾಯ್ಸ್‌ಕೆಡೆಟ್ ಕಾರ್ಪ್" ಯುದ್ದ ಭೂಮಿಯಲ್ಲಿ ಗುಂಡಿಗೆ ಬೆದರದೆ ದೂತಸೇವೆ ಮಾಡಿತು. ಬಾಲಕರ ಸೇವೆಯನ್ನು ಬಿ.ಪಿ.ಯವರು ಮೆಚ್ಚಿದರು. ಅವರ ಮನದಲ್ಲಿ 'ಬಾಲಕರಿಗಾಗಿ ಸ್ಕೌಟಿಂಗ್' ಎಂಬ ವಿಚಾರದ ಬೀಜ ಬಿತ್ತಿತು.

1907ರಲ್ಲಿ ರಾಬರ್ಟ್ ಸ್ಟೀಫನ್‌ಸನ್ ಸ್ಮಿತ್ ಬೇಡನ್ ಪೊವೆಲ್, ಲೆಫ್ಟಿನೆಂಟ್ ಜನರಲ್ ಅವರು ಬ್ರೌನ್ಸಿ ದ್ವೀಪದಲ್ಲಿ ಪ್ರಾರಂಭಿಸಿದ ಸ್ಕೌಟ್ ಚಳವಳಿಯು ಬಹಳ ವೇಗವಾಗಿ ಇಂಗ್ಲೆಂಡಿನ ಉದ್ದಗಲಕ್ಕೂ ವ್ಯಾಪಿಸಿದುದೇ ಅಲ್ಲದೆ ವಿದೇಶಗಳಲ್ಲೂ ಹರಡಿತು. ಗಂಡು ಮಕ್ಕಳಿಗಾಗಿ ಆರಂಭಿಸಿದ ಚಳವಳಿಯಲ್ಲಿ ಕೆಲವೇ ಹೆಣ್ಣುಮಕ್ಕಳು ತಮ್ಮನ್ನು ತೊಡಗಿಸಿಕೊಂಡರು. ತಮ್ಮನ್ನು ಗರ್ಲ್ ಸ್ಕೌಟ್ ಎಂದು ಕರೆದುಕೊಂಡು ಸಂಸ್ಥಾಪಕರಾದ ಬೇಡನ್ ಪೊವೆಲ್ ಅನುಮತಿಯನ್ನು ಪಟ್ಟುಹಿಡಿದು ಪಡೆದರು. ಈ ವಿನೂತನ ಚಳವಳಿ 12 ವರ್ಷದ ಬಾಲಕಿಯಾದ ಅಲೇವ್‌ಳನ್ನು ಆಕರ್ಷಿಸದೆ ಬಿಡಲಿಲ್ಲ. ಈ ಚಳವಳಿಗೆ ಸೇರಬೇಕೆಂಬ ಮಗಳ ಹಂಬಲ ಮತ್ತು ಸಿದ್ಧತೆ ತಾಯಿಗೆ ತಿಳಿಯಿತು. ತಾಯಿ ಹೌಹಾರಿದಳು. ಅಂದಿನ ಸಮಾಜದಲ್ಲಿ ಹೆಣ್ಣುಮಕ್ಕಳ ಚಟುವಟಿಕೆ ಮನೆಗೆ ಮಾತ್ರ ಸೀಮಿತ. ಗಂಡು ಹುಡುಗರಂತೆ ಹೊರಗೆ ಹೋಗುವುದೆಂದರೇನು? ಈ ಹೊಸ ವಿಚಾರವನ್ನು ಅಲ್ಲಗಳೆದು, 'ಈ ಗರ್ಲ್‌ಸ್ಕೌಟ್ ಹೆಣ್ಣು ಮಕ್ಕಳಿಗೆ ಶಾಪವಾಗಿ ಬಂದಿದೆ. ಇದು ಹೆಣ್ಣು ಮಕ್ಕಳನ್ನು ನಿರಂಕುಶರನ್ನಾಗಿ ಮಾಡುತ್ತಾರೆ' ಎನ್ನುತ್ತಾ ಅಲೇವ್‌ರನ್ನು ಈ ಚಳವಳಿಗೆ ಸೇರಬಾರದೆಂದು ಖಂಡಿಸಿದರಲ್ಲದೆ ಅವರ ಮುಂದೆ ಸ್ಕೌಟ್ ಸಮವಸ್ತ್ರ ಧರಿಸಲೂ ಬಿಡಲಿಲ್ಲ. ಇದರಿಂದಾಗಿ ಎಳೆಯ ಮನಸ್ಸಿಗೆ ಅಪಾರವಾದ ನೋವುಂಟಾಯಿತು. ತಾಯಿ–ಮಗಳ ಮಧುರ ಬಾಂಧವ್ಯದ ಮಧ್ಯೆ

ಒಂದುರೀತಿಯ ಅವ್ಯಕ್ತ ಕಹಿ ಭಾವನೆ ಏರ್ಪಟ್ಟಿತು.

ಕ್ಯಾತರಿನ್ ತನ್ನ ಮಕ್ಕಳನ್ನು ಸಿರಿವಂತಿಕೆಯಲ್ಲಿ ಬೆಳೆಸಿದರೂ ಅವರಲ್ಲಿ ಜವಾಬ್ದಾರಿ ಮತ್ತು ಆತ್ಮವಿಶ್ವಾಸವನ್ನು ಬೆಳೆಸಲು ಎಲ್ಲ ಕೆಲಸಗಳನ್ನು ಮಾಡಿಸುತ್ತಿದ್ದರು. ಜೀವನವನ್ನು ಹಸನ್ಮುಖಿಗಳಾಗಿ ಕಳೆಯುವಂತೆ ಬೆಳೆಸಿದರು.

"ನನ್ನ ಪತಿಯವರ ಮತ್ತು ನನ್ನ ಅಭಿರುಚಿಗಳು ತೀರಾ ಭಿನ್ನವಾಗಿದ್ದವು. ಆದರೆ ನಾವು ಮತ್ತು ಅವರು ಪ್ರೀತಿಯನ್ನು ಹಂಚಿಕೊಂಡು ಒಬ್ಬರಿಗೊಬ್ಬರು ಬದ್ಧರಾಗಿ ಕುಟುಂಬವನ್ನು ಬೆಳೆಸಿದೆವು'. ಮತ್ತೊಮ್ಮೆ ಗಂಡನ ಬಗ್ಗೆ ಹೀಗೆ ಬರೆಯುತ್ತಾರೆ: 'ಗಂಡಸರು ದೇವರು ಮಾಡಿರುವ ಒರಟಾದ ಮೂರುತಿ, ಹೆಂಗಸರು ಈ ಮೂರುತಿಗೆ ತನ್ನ ಅಂತಿಮ ಸ್ಪರ್ಶವನ್ನು ಕೊಟ್ಟು ಪೂರ್ಣಗೊಳಿಸಬೇಕು'.

'ನಾನು ನನ್ನ ಮಕ್ಕಳಿಗೆ ಬೇಕಾದ ಲೌಕಿಕ ಅನುಕೂಲತೆಗಳನ್ನು, ಸುಂದರ ಪ್ರಾಪಂಚಿಕ ವಸ್ತುಗಳನ್ನು ನೀಡುವುದರ ಜೊತೆಗೆ ಅವರಲ್ಲಿ ಪಾರಮಾರ್ಥಿಕ ಮತ್ತು ನೈತಿಕ ಅವಶ್ಯಕತೆಯನ್ನು ಬೆಳೆಸಲು ಪ್ರಯತ್ನಿಸಿದ್ದೇನೆ. ಎಳೆಯ ಸಸಿಗಳು ಬೇರೂರಲು ಮೃದುವಾದ ಜಾಗರೂಕ ಪೋಷಣೆ ಅವಶ್ಯಕ. ಹಾಗೆಯೇ ಮಕ್ಕಳನ್ನು ಬೆಳೆಸುವಾಗ ಕಲಿಸುವ ವಿಷಯಗಳ ಬೇರನ್ನು ಮನದಾಳದಲ್ಲಿ ಊರಿಸಬೇಕಾದರೆ ಪ್ರೀತಿಯ ಅಗತ್ಯವಿದೆ. ಬಲವಂತದಿಂದ, ಕಠಿಣ ಶಿಸ್ತಿನಿಂದ ಮತ್ತು ನಿಯಮಗಳಿಂದ ಬೆಳೆಸಿದರೆ ಅಸಹಜವಾಗಿ ಬೆಳೆಯುತ್ತಾರೆ. ಬಲವಂತವಾಗಿ ಬೆಳೆದ ಅಭ್ಯಾಸಗಳು ಶಾಶ್ವತವಾಗಿ ಉಳಿಯುವುದಿಲ್ಲ. ನನ್ನ ಮಕ್ಕಳನ್ನು ಮುಕ್ತವಾಗಿ ಪ್ರಕೃತಿಯ ಮಡಿಲಲ್ಲಿ ಬೆಳೆಸಿದ್ದೇನೆ' ಎಂದಿದ್ದಾರೆ. ಇಂತಹ ತಾಯಿಯನ್ನು ಪಡೆದ ಅಲೇವ್ ಧನ್ಯರು. ಇಂದಿನ ತಾಯಿಯರು ಸಾಮಾಜಿಕ ಶಾಂತಿಗಾಗಿ ಮತ್ತು ಮಾನವ ಸಂಕುಲದ ಉಳಿವಿಗಾಗಿ ಮಕ್ಕಳಲ್ಲಿ ಈ ರೀತಿಯ

ಮನೋಭಾವವನ್ನು ಬೆಳೆಸಬೇಕು.

ತನ್ನ ಮಕ್ಕಳ ಜೊತೆ ದೇವಾಲಯಕ್ಕೆ ಹೋಗುತ್ತಾ ದಾರಿಯಲ್ಲಿ ಸಿಗುವ ಸೇತುವೆಯ ಮೇಲೆ ನಿಂತು ನದಿ ಹರಿಯುತ್ತಿರುವುದನ್ನು ತೋರಿಸುತ್ತಾ, ಅದರ ಜುಳು ಜುಳು ನಾದವನ್ನು ಆಲಿಸುತ್ತಾ, ಇದು ಸೃಷ್ಟಿಯನ್ನು ಹಾಡಿ ಹೊಗಳುವ ಪ್ರಕೃತಿಗಾನ ಎಂದು ತಿಳಿಸುತ್ತಾ ಸಾಗುತ್ತಿದ್ದರು. ದೇವರು ದೇವಾಲಯದಲ್ಲಿ ಮಾತ್ರವಲ್ಲ ಎಲ್ಲೆಡೆಯೂ ಇದ್ದಾನೆ ಎಂಬ ಉದಾತ್ತ ದೈವೀಕಲ್ಪನೆ ಅವರದಾಗಿತ್ತು.

ಅರಿಯಲ್ ಮತ್ತು ಅಲೇವ್‌ರ ವಿವಾಹವು ತಾಯಿಯಲ್ಲಿ ನಿರಾಶೆಯನ್ನು ಮೂಡಿಸಿತ್ತು. ಯುವಕ ಹಾಗು ಶ್ರೀಮಂತ ಅಳಿಯಂದಿರ ಕನಸು ಕಂಡಿದ್ದ ಕ್ಯಾತರಿನ್‌ಗೆ ಸಿಕ್ಕಿದ್ದು ವಯಸ್ಸಿನಲ್ಲಿ ತಮ್ಮ ಮಕ್ಕಳಿಗಿಂತ ಹೆಚ್ಚು ಅಂತರ ಹೊಂದಿದ್ದ ಅಳಿಯಂದಿರು. ಅದರಲ್ಲೂ ಬಿ.ಪಿ.ಯವರು ಸಿರಿವಂತರೂ ಆಗಿರಲಿಲ್ಲ. ಆದರೂ ವಿಧಿಬರಹ ಮೀರಿ ನಿಲ್ಲಲು ಸಿರಿವಂತ ತಾಯಿಗೆ ಆಗಲಿಲ್ಲ. ಈ ಅಳಿಯಂದಿರನ್ನು ಸ್ವೀಕರಿಸಬೇಕಾದ ಅನಿವಾರ್ಯತೆ ಅವರಿಗುಂಟಾಯಿತು.

'ಮಹಾ ಮಾತೆ ಕ್ಯಾತರಿನ್', ಅಲೇವ್ ಬೇಡನ್ ಪಾವೆಲ್ಲರಂತಹ 'ವಿಶ್ವ ಮಾತೆ'ಯನ್ನು ನಮಗೆ ಉಡುಗೊರೆಯಾಗಿ ನೀಡಿದುದು ವಿಶ್ವದ ಅನೇಕ ಸೌಭಾಗ್ಯಗಳಲ್ಲಿ ಒಂದು. ಅಂತಿಮ ದಿನಗಳಲ್ಲಿ ಅವರು ಅಲೇವ್ ಬಳಿಯೇ ಇದ್ದು, ಅವರು ಅಂದು ಖಂಡಿಸಿದ್ದ ಇಂದಿಗೂ ಅಷ್ಟೇನೂ ಸಮಾಧಾನ ತರದ ಚಳವಳಿಯಲ್ಲಿ ಅಲೇವ್ ಲವಲವಿಕೆಯಿಂದ, ಆಸಕ್ತಿಯಿಂದ ಕೆಲಸ ಮಾಡುವುದನ್ನು ನೋಡುತ್ತಾ 1932ರಲ್ಲಿ ದೈವಾಧೀನರಾದರು.

# ಸ್ಮೃತಿ : 4

## ಅಲೇವ್ ಸೇಂಟ್ ಕ್ಲೇರ್ ಸೋಮ್ಸ್‌ಳ ಬಾಲ್ಯ

ಅಲೇವ್ ಹುಟ್ಟಿದ್ದು 22 ಫೇಬ್ರವರಿ 1889 ರಂದು ಸ್ಟಬ್ಬಿಂಗ್ ಕೋರ್ಟ್ ಚಸ್ಟರ್‌ಫೀಲ್ಡ್ ಲಂಡನ್ನಿನಲ್ಲಿ. ಅವಳು ಹುಟ್ಟುವಾಗ ತಾಯಿ ಮತ್ತು ಮಗುವಿನ ಜೀವ ಆಪತ್ತಿನಲ್ಲಿತ್ತು. ಆದರೆ ದೇವರ ಕೃಪೆಯಿಂದ ಇಬ್ಬರೂ ಬದುಕಿ ಉಳಿದರು. ಈ ವಿಶ್ವಕ್ಕಾಗಿ ಮತ್ತು ನಮಗಾಗಿ. ಈ ಮಗುವಿಗೆ ಅಲೇವ್ ಸೇಂಟ್ ಕ್ಲೇರ್ ಸೋಮ್ಸ್ ಎಂದು ನಾಮಕರಣ ಮಾಡಿದರು. ಅವಳ ಹೆಸರಿನಲ್ಲಿ, ಅಲೇವ್ ಎಂಬ ಹೆಸರನ್ನು ತಂದೆಯವರು ಇಟ್ಟಿದ್ದರು. ಅವರ ದತ್ತು ತಾಯಿ (god mother) ಹೆಸರು ಸೇಂಟ್ ಕ್ಲೇರ್. ಅವರ ಮನೆತನದ ಹೆಸರು ಸೋಮ್ಸ್ ಅನ್ನು ಸೇರಿಸಿದರು. ಈ ಎರಡನೆಯ ಸುಂದರವಾದ ಕೋಮಲ ಮಗು ಸಿರಿವಂತ ಸುಸಂಸ್ಕೃತ ಪರಿಸರದಲ್ಲಿ ಬೆಳೆದಳು. ಬಾಲ್ಯದಿಂದಲೂ ಶಿಸ್ತಿನಿಂದ ಕೂಡಿದ ವಿದ್ಯಾಭ್ಯಾಸ ಮನೆಯಲ್ಲೇ ನಡೆಯಿತು. ಅವಳಿಗೆ 12 ವರ್ಷ ತುಂಬಿದಾಗ ಅವರ ತಂದೆ ಶಿಕ್ಷಣವನ್ನು ನಿಲ್ಲಿಸಿದರು. ಬಾಲ್ಯದಿಂದಲೂ ಈ ಚುರುಕಾದ ಹುಡುಗಿ ಸ್ಥಳೀಯ ಆಟ, ಟೆನ್ನಿಸ್, ಸ್ಕ್ವಾಷ್, ಫುಟ್‌ಬಾಲ್, ಸ್ವಿಮ್ಮಿಂಗ್, ಸ್ಕೇಟಿಂಗ್, ದೋಣಿ ನಡೆಸುವುದು ಇತ್ಯಾದಿಗಳಲ್ಲಿ ಭಾಗವಹಿಸುತ್ತಿದ್ದಳು. ಕುದುರೆ ಸವಾರಿ ಮಾಡುತ್ತಿದ್ದಳು. ಇದರ ಜೊತೆಜೊತೆಗೆ ಪಿಟೀಲುವಾದನ, ಸಬತ್ ನೃತ್ಯ, ಚೈನೀಸ್ ಡಾಲಿ ನೃತ್ಯಗಳನ್ನು ಕಲಿತಳು. ತೋಟದಲ್ಲಿ ಕೆಲಸ ಮಾಡುವುದು, ಗಿಡ ಬೆಳೆಸುವುದು, ತಂದೆಯಂತೆ ಮಗಳಿಗೂ ಪ್ರಿಯವಾದ ಕೆಲಸವಾಗಿತ್ತು. ಅವಳಿಗೆ ಅನೇಕ ಸಸ್ಯಗಳ ವೈಜ್ಞಾನಿಕ ಹೆಸರು ಮತ್ತು ಅದರ ಪರಿಚಯವಿತ್ತು. ಪ್ರಾಣಿಗಳು ಇವಳಿಗೆ ಸ್ನೇಹಿತರು. ಅವಳು ನಾಯಿಯನ್ನು ಸಾಕಿದ್ದಳು. ಅದನ್ನು **'ಡೂಗಿ'** ಎಂದು ಕರೆಯುತ್ತಿದ್ದಳು. ಅವುಗಳೊಡನೆ ಆನಂದದಿಂದ ಆಟವಾಡುತ್ತಿದ್ದಳು. ಆಗಾಗ್ಗೆ ತಂದೆ ಜೊತೆಗೆ ಬೇಟೆಗೆ ಹೋಗುತ್ತಿದ್ದಳು. ಮೂರು ವರ್ಷದವಳಿದ್ದಾಗ ತಂದೆಯೊಡನೆ ಬೇಟೆಗೆ ಹೋದ ರೋಚಕ

ನೆನಪು ನನಗಿದೆ ಎನ್ನುತ್ತಿದ್ದಳು. ಚಿಕ್ಕ ವಯಸ್ಸಿನಿಂದಲೂ ಅವಳಿಗೆ ಸಾಮಾಜಿಕ ಕಾಳಜಿ ಇತ್ತು. ಒಮ್ಮೆ 'ಡಯಾನ' ಎಂಬ ಪಿಟೀಲು ನುಡಿಸಿ ಸಂಗೀತ ಕಾರ್ಯಕ್ರಮದಲ್ಲಿ ಭಾಗವಹಿಸಿ ಬಂದ ಹಣವನ್ನು ಹಳ್ಳಿಯ ಗ್ರಂಥಾಲಯಕ್ಕೆ ದೇಣಿಗೆ ನೀಡಿದಳು. ಮನೆಯಲ್ಲಿ ಸೋದರಿ ಆರಿಯಲ್ ಜೊತೆ ಕುಕ್ಕುಟಾಗಾರವನ್ನು ನೋಡಿಕೊಳ್ಳುತ್ತಿದ್ದಳು. ಮನೆಯ ಎಲ್ಲಾ ಕೆಲಸಗಳನ್ನು ಆನಂದದಿಂದ ಅಚ್ಚುಕಟ್ಟಾಗಿ ಮಾಡುತ್ತಾ ತಾಯಿಯ ಮೆಚ್ಚಿಗೆಗೆ ಪಾತ್ರಳಾಗಿದ್ದಳು.

ದಕ್ಷಿಣ ಆಫ್ರಿಕದ ಹೆಮ್ಮೆಯ ನಗರ ಮೇಫಕಿಂಗ್‌ನಲ್ಲಿ ನೆಲೆಸಿದ ಬ್ರಿಟಿಷ್ ಕಾಲೋನಿಗಳ ಮೇಲೆ ಅಲ್ಲಿನ ಗುಡ್ಡಗಾಡಿನ ಜನಾಂಗವಾದ 'ಬೋಯರ್ಸ್' ಧಾಳಿ ಮಾಡಿ ಕಿರುಕುಳ ಕೊಡುತ್ತಿದ್ದರು. ಬ್ರಿಟಿಷರು 1899ರಲ್ಲಿ ಬೇಡನ್ ಪೊವೇಲ್ ನಾಯಕತ್ವದಲ್ಲಿ ಬೋಯರ್ಸ್ ಮೇಲೆ ಯುದ್ಧ ಸಾರಿದರು. ಯುದ್ಧ ಸುದೀರ್ಘವಾಗಿ 217 ದಿನ ನಡೆಯಿತು. 7ನೇ ಮೇ 1900ರಂದು ಯುದ್ಧವನ್ನು ಬ್ರಿಟೀಷರು ಗೆದ್ದರು. ಬಿ.ಪಿಯವರು 'ಮೇಫ್‌ಕಿಂಗ್ ಯುದ್ಧವೀರ' ಎಂದು ಪ್ರಸಿದ್ಧರಾದರು. ಬಾಲಕಿ ಅಲೇವ್ ಈ ನಾಯಕನ ವಿಚಾರ ಓದಿ, ತಿಳಿದು ಹೆಮ್ಮೆಪಡುತ್ತಾ ತನಗರಿವಿಲ್ಲದಂತೆ ಅವರ ಆರಾಧಕಿಯಾದಳು.

ಅಂದಿನ ಕಾಲದಲ್ಲಿ ಇಂಗ್ಲೆಂಡಿನಲ್ಲಿ ಇಂತಹ ಸುಪ್ರಸಿದ್ಧರ ಛಾಯಾಚಿತ್ರ ಹೊಂದಿರುವ ಲೋಹದ ಮೆಡಲ್ ಮತ್ತು ಗುಂಡಿಯನ್ನು ಅವರ ಗೌರವಾರ್ಥವಾಗಿ ತಯಾರಿಸಿ ಮಾರಾಟ ಮಾಡುತ್ತಿದ್ದರು. ಇದನ್ನು ತಿಳಿದಿದ್ದ ಅಲೇವ್ ಅಂಗಡಿಗೆ ಹೋಗಿ ಬೇಡನ್ ಪಾವೆಲ್‌ರ ಗುಂಡಿಯನ್ನು ಕೊಂಡು ಹೆಮ್ಮೆಯಿಂದ ಮತ್ತು ಸಂತಸದಿಂದ ಧರಿಸಿದಳು. ಅವಳ ಆರಾಧಕ ಈ 'ಹೀರೋ' ಮುಂದೆ ಅವಳ ಪತಿಯಾದದ್ದು, ಎಂತಹ ಆಶ್ಚರ್ಯ!

ಅಲೇವ್ 12 ವರ್ಷದವಳಿದ್ದಾಗ ಬೇಡನ್ ಪಾವೆಲ್ಲರು ಬಾಲಕರಿಗಾಗಿ ಪ್ರಾರಂಭಿಸಿದ ಸ್ಕೌಟಿಂಗ್ ಚಳವಳಿಯನ್ನು ಹೆಣ್ಣು ಮಕ್ಕಳೂ ಅನುಕರಿಸಿ ಗರ್ಲ್ ಸ್ಕೌಟ್ ಚಳವಳಿಯನ್ನು ಪ್ರಾರಂಭಿಸಿದರು. ಈ ಚಳವಳಿ ಅಲೇವಳನ್ನು

ಆಕರ್ಷಿಸಿತು. ಆದರೆ ಈ ಚಳವಳಿಗೆ ಸೇರಲು ತಾಯಿಯವರು ವಿರೋಧಿಸಿದರು. ಇದರಿಂದ ಇವಳಿಗೆ ಅತೀವ ನಿರಾಶೆಯಾಯಿತು. ಆದರೆ ಮುಂದೆ ಈ ಚಳವಳಿಯ ನಾಯಕಿಯಾಗಿ ಚಳವಳಿಯನ್ನು ಮುನ್ನಡೆಸುತ್ತೇನೆ ಎಂದು ಅಂದು ಬಾಲಕಿ ಅಲೇವ್‌ಗೆ ತಿಳಿದಿರಲಿಲ್ಲ!

"ನಾನೊಂದು ಆನೆಮರಿ ಕೊಂಡೆ ಅದನ್ನು 'ಟ್ವೀಟ್ಸಿ' ಎಂದು ಕರೆದೆ. ನನ್ನ ತಂದೆಯವರು ಮನೆ ಬದಲಿಸುವಾಗ ಅದಕ್ಕೆ ಜಾಗವಿಲ್ಲವೆಂದರು. ಆದರೆ ನಾನು ಉಪಾಯದಿಂದ ಸಾಗಿಸಿದೆ. ಅದೂ ನನ್ನ ಜೀವನ ಸಂಗಾತಿಯಾಯಿತು' ಎಂದು ಅಲೇವ್ ಹೇಳಿದ್ದಾರೆ.

ಅಲೇವ್, ತಾಯಿ ಪ್ರತಿದಿನ ದಿನಚರಿಯನ್ನು ಬರೆಯುತ್ತಿದ್ದುದನ್ನು ನೋಡುತ್ತಿದ್ದಳು. ಇದರಿಂದ ಪ್ರಭಾವಿತಳಾದ ಅಲೇವ್ 1900 ಜನವರಿ ಒಂದು, ಹೊಸ ವರ್ಷದಂದು ದಿನಚರಿ ಬರೆಯಲಾರಂಭಿಸಿದಳು. ತಾಯಿಯ ದಿನಚರಿ ಒಂದು ದೊಡ್ಡ ಗ್ರಂಥದಂತೆ ಇತ್ತಂತೆ. ಅದರಲ್ಲಿ ಅಲ್ಲಲ್ಲಿ ಕುಟುಂಬದ ಭಾವಚಿತ್ರಗಳು, ತಂದೆಯವರ ಚಿತ್ರಕಲೆಯ ವರ್ಣಚಿತ್ರಗಳನ್ನು ಅಂಟಿಸಲಾಗಿತ್ತಂತೆ. ಈ ಪುಸ್ತಕವನ್ನು ಅವರ ತಾಯಿ ಮೂರುಬಾರಿ ಪ್ರತಿ ಮಾಡಿ ವಿವಾಹದ ನಂತರ ಕುಟುಂಬದ ಸ್ಮೃತಿಯಾಗಿ ಆರ್ಥರ್, ಅರಿಯಲ್ ಮತ್ತು ಅಲೇವ್‌ಗೆ ನೀಡಿದರಂತೆ.

ಅಲೇವ್ ಅನುಕೂಲಕರವಾಗಿ ಉತ್ತಮ ಮಟ್ಟದ ಜೀವನ ನಡೆಸುತ್ತಾ ಹದಿಹರೆಯಕ್ಕೆ ಕಾಲಿಟ್ಟಾಗ ಅವಳಲ್ಲಿ ಖಿನ್ನತೆ ಉಂಟಾಗಿತ್ತು. 'ನಾನು ಸಂತಸವಾದ, ಸುರಕ್ಷಿತ ಜೀವನವನ್ನು ನಡೆಸುತ್ತಿದ್ದೇನೆಯಾದರೂ, ನನ್ನ ಜೀವನ ಶುದ್ಧಾಂಗ ಅನುಪಯುಕ್ತ' ಎಂದು ಅಂದುಕೊಳ್ಳುತ್ತಿದ್ದಳು. 'ಅಕ್ಕ ಆರಿಯಲ್ 1906ರಲ್ಲಿ ತಂದೆಯ ಜೊತೆ ಪ್ರವಾಸಕ್ಕೆ ಹೊರಟಳು. ಆ ಎರಡು ತಿಂಗಳು ತಾಯಿ ನನಗೆ ಗೃಹಸಂಸ್ಕಾರ ಕೌಟುಂಬಿಕ ವಿಚಾರಗಳಲ್ಲಿ ಆಳವಾದ

ತರಬೇತಿ ನೀಡಿದಳು. ಮನೆಯ ಆಳುಗಳು ನನ್ನನ್ನು ಕಂಡು 'ಅಯ್ಯೋ ಪಾಪ ಅಲೇವ್' ಎನ್ನುತ್ತಿದ್ದರು. ಆದರೆ ನನಗೇನೂ ಬೇಸರವೆನಿಸಲಿಲ್ಲ. ಪಾರ್ಟಿಗಳಿಗೆ ಹೋಗುತ್ತಿದ್ದೆ. ಕ್ರಮೇಣ ಅದರಲ್ಲೂ ಆಸಕ್ತಿ ಕಳೆದುಕೊಂಡೆ. ನನ್ನ ಹೃದಯ ಪ್ರೀತಿಯಿಂದ ತುಂಬಿತು. ಆದರೆ ಅದನ್ನು ವ್ಯಕ್ತಪಡಿಸುವ ರೀತಿ ತಿಳಿದಿರಲಿಲ್ಲ."

ಒಮ್ಮೆ ಲಿಲಿಪುಟ್ ಊರಿಗೆ ಹೋದಾಗ ಬೆಕ್ ಮ್ಯಾನಸರ್ ನನ್ನ ಕಣ್ಣು ತೆರೆಯಿಸಿದಳು. ನನ್ನೊಳಡಗಿದ್ದ ಸೇವಾಮನೋಭಾವವನ್ನು ತೋರಿಸಿಕೊಟ್ಟಳು. ನಾನು ಮೊದಲು ಸೇವೆ ಮಾಡಿದ್ದು ICAA - "The Invaild Children's Aid Association". ಅಲ್ಲಿ ಅಂಗವಿಕಲ ಮಕ್ಕಳನ್ನು ನೋಡಿಕೊಳ್ಳುತ್ತಿದ್ದೆ. ಅವರ ಬಗ್ಗೆ ಅನುಕಂಪ ಮೂಡಿತು. ನಾನು ಅರ್ಧದಿನ ಅವರ ಸೇವೆಯಲ್ಲಿ ತೊಡಗಿಸಿಕೊಂಡೆ. ಅದು ನನ್ನ ತಾಯಿಯ ಇಷ್ಟದ ವಿರುದ್ಧವಾಗಿತ್ತು. ನನ್ನ ಡೂಗಿ ಸತ್ತದ್ದು ನನಗೊಂದು ದೊಡ್ಡ ಕೊರತೆಯಾಗಿತ್ತು. ಆದರೆ ಮತ್ತೊಂದು ನಾಯಿಮರಿ ಬಂದಮೇಲೆ ಅದಕ್ಕೆ ಡೂಗಿ2 ಎಂದು ಹೆಸರಿಟ್ಟು ಸಮಾಧಾನಪಟ್ಟೆ.'



**ಮೂರು ವರ್ಷದ ಅಲೇವ್ ಕ್ಲೇರ್ ಸೋಮ್ಸ್**

ಆದರೂ ಅವಳ ಮನಸ್ಸು ತುಮುಲ, ಗೊಂದಲಗಳಿಂದ ಮುಕ್ತವಾಗಲಿಲ್ಲ. ಎಳೆಯತನದಲ್ಲೇ ಎಂತಹ ನೈಜ ಸಾಮಾಜಿಕ ಕಾಳಜಿ! 'ನಾನು ರೋತಿ ಎಂಬುವನನ್ನು ಪ್ರಥಮಬಾರಿಗೆ ಪ್ರೀತಿಸಿದೆ, ಬಹಳವಾಗಿ ಪ್ರೀತಿಸಿದೆ. ಆದರೆ ಅವನು ನನ್ನನ್ನು ನಿರಾಶೆಗೊಳಿಸಿದನು. ನಂತರ ಮೂರು ನಾಲ್ಕು ಸಂಗಾತಿಗಳು ದೊರೆತರು. ಆದರೆ ಅವರನ್ನು ಸ್ವೀಕರಿಸಲು ನನಗಾಗಲಿಲ್ಲ. ನಾನು ಕಂಡ ಕನಸಿನ ಪ್ರೇಮಿ ಅವರಾಗಲಿಲ್ಲ.

'ಒಮ್ಮೆ ನನ್ನ ತಾಯಿ ಮನೆಯಲ್ಲಿ ಇಲ್ಲದಾಗ ಮನೆಯ ಜವಾಬ್ದಾರಿ ನಿರ್ವಹಿಸಬೇಕಾಗಿ ಬಂತು. ನನಗೆ ಅಭ್ಯಾಸವಿರಲಿಲ್ಲ. ನಾನೇನು ಮಾಡುತ್ತೇನೊ ಎಂಬ ಭಯವಿತ್ತು. ಆದರೂ ಪ್ರಾರಂಭಿಸಿದೆ. ಒಂದಂತು ಸತ್ಯ, ನಾನು ಎಂತಹ ಸಂದರ್ಭದಲ್ಲೂ ಹೊಂದಿಕೊಳ್ಳುವ ಆತ್ಮವಿಶ್ವಾಸ ಹೊಂದಿದ್ದೆ.'

'ಹದಿಹರೆಯ ಮತ್ತು ಬಾಲ್ಯದ ನಡೆಯು ಉಯ್ಯಾಲೆ ಆಡುತ್ತಾ ಹೆಣ್ತನಕ್ಕೆ ಕಾಲಿಟ್ಟೆ. ಒಂದು ಪಾರ್ಟಿಯನ್ನು ತಂದೆ-ತಾಯಿಯವರು ಏರ್ಪಡಿಸಿದರು. ಇದು ಮದುವೆಯ ಪ್ರಸ್ತಾಪ ಸೂಚಕವಾಗಿತ್ತು.



**ಹದಿಹರೆಯದ ಅಲೇವ್**

## ಸ್ಮೃತಿ : 5

## ಅಲೇವ್ ವಿವಾಹ

ಅಲೇವ್ 23 ವರ್ಷದವಳಿದ್ದಾಗ ತಂದೆಯ ಜೊತೆಗೆ ವೆಸ್ಟ್ ಇಂಡೀಸ್‌ಗೆ 1912 ಜನವರಿ 3 ರಂದು ಅರ್ಕೇಡಿಯನ್ ಹಡಗಿನಲ್ಲಿ ಹೊರಟಳು. ಬಂದರಿಗೆ ಬಂದಾಗ ಒಂದುಕಡೆ ಅಲ್ಲಿನ ಕೆಲಸಗಾರರು ಮುಷ್ಕರ ಹೂಡಿದ್ದರು. ಮತ್ತೊಂದುಕಡೆ ಸ್ಕೌಟ್ ಮಕ್ಕಳು ನಾಯಕರಿಗೆ ಗೌರವ ವಂದನೆ ಸಲ್ಲಿಸುತ್ತಿದ್ದರು. ಅಲೇವ್‌ಗೆ ನಾಯಕರನ್ನು ನೋಡುತ್ತಿದ್ದಂತೆಯೇ ಏಕಕಾಲದಲ್ಲಿ ಆಶ್ಚರ್ಯ ಹಾಗೂ ಸಂತಸ ಉಂಟಾಯಿತು. ತನ್ನ ಆರಾಧಕ, ಮೇಫ್‌ಕಿಂಗ್ ವೀರಯೋಧ ಲಾರ್ಡ್ ಬೇಡನ್ ಪೊವೆಲ್ (ಬಿ.ಪಿ) ಅವರನ್ನು ಗುರುತಿಸಿದಳು. ಮುಷ್ಕರ ಮುಗಿಯಿತು, ಎಲ್ಲರೂ ಹಡಗನ್ನು ಹತ್ತಿದೆವು. ಮಾರನೆಯದಿನ ಬೆಳಿಗ್ಗೆ ಬಿ.ಪಿಯವರು ಹಡಗಿನ ಮೇಲು ಅಂಗಳಕ್ಕೆ (ಡೆಕ್) ಬಂದರು. ಕೆಲವೇ ಮಂದಿ ಅಲ್ಲಿ ನಡೆದಾಡುತ್ತಿದ್ದರು. ಗಾಳಿ ಒರಟಾಗಿತ್ತು. ಬಿ.ಪಿಯವರು ಮುಂದೆ ನಡೆಯುತ್ತಿದ್ದ ಇಬ್ಬರೂ ಯುವತಿಯರನ್ನು ನೋಡಿ 'ಒಬ್ಬರು ತಮ್ಮ ಕುಟುಂಬದ ಸ್ನೇಹಿತ ಹಿಲ್ಡಾಬರ್ರೆ ರೋಡ್‌ವಾಲ್ಡ್, ಇನ್ನೊಬ್ಬರು ಅಪರಿಚಿತರು, ಆದರೆ ಎಲ್ಲಿಯೋ ನೋಡಿದ ನೆನಪು' ಎಂದುಕೊಳ್ಳುತ್ತಿರುವಾಗ ಹಿಲ್ಡಾಬರ್‌ರವರು ಸಂಧಿಸಿದರು ಪರಸ್ಪರ ಶುಭ ಕೋರಿದರು.ನಂತರ ಅವರು 'ನನ್ನ ಸ್ನೇಹಿತೆ ಮಿಸ್ ಅಲೇವ್ ಸೋಮ್ಸ್‌ರನ್ನು ಪರಿಚಯ ಮಾಡಿಕೊಳ್ಳಿ' ಎಂದು ಪರಿಚಯಿಸಿದರು. 'ಅಲೇವ್ ಅವರ ನಿಲುವು, ನಡೆಯಲ್ಲಿ ಪ್ರಾಮಾಣಿಕತೆಯನ್ನು, ಲೋಕಜ್ಞಾನವನ್ನು ಸಾರುವ ಪ್ರವೃತ್ತಿಯುಳ್ಳವಂತೆ ಕಾಣುತ್ತಿತ್ತು. ಆದ್ದರಿಂದಲೇ ಈಕೆ ಅಪರಿಚಿತಳಾದರೂ ಒಮ್ಮೆ ನೋಡಿದ್ದ ಇವಳ ನೆನಪು ನನ್ನ ಮನಸ್ಸಿನಲ್ಲಿ ನೆಲೆನಿಂತಿತ್ತು' ಎಂದು ಬಿ.ಪಿಯವರು ಅಂದುಕೊಂಡರು. ಇಬ್ಬರೂ ಪರಸ್ಪರ ಮಾತನಾಡಲಾರಂಭಿಸಿದರು. ಬಿ.ಪಿಯವರು 'ನಾನು ನಿಮ್ಮನ್ನು ಹೈಡ್ ಪಾರ್ಕ್‌ನಲ್ಲಿ ನೋಡಿದ್ದೇನೆ' ಎಂದರು. ತಕ್ಷಣ ಅಲೇವ್ 'ನಾನು ಲಂಡನ್ ವಾಸಿಯಲ್ಲ' ಎಂದರು. ಮರುಕ್ಷಣವೇ ಜ್ಞಾಪಕ ಬಂದಿತು. 'ಹೌದು ನಾನು ಲಂಡನ್‌ಗೆ ಪ್ರವಾಸ ಹೋಗಿದ್ದೆ' ಎಂದರು. ಮತ್ತೊಮ್ಮೆ ಬಿ.ಪಿಯವರು 'ಹೋದ ವರ್ಷ ನೈಟ್ಸ್ ಬ್ರಿಗೇಡ್

ಬ್ಯಾರಾಕ್ ಬಳಿ ನಿಮ್ಮನ್ನು ಒಬ್ಬರ ಸಂಗಡ ನೋಡಿದ್ದೆ. ಆಗ ನಾನು ನಿಮ್ಮನ್ನು ಹಿಂಭಾಗದಿಂದ ಗಮನಿಸಿದ್ದೆ. ಹೀಗಾಗಿ ನೀವು ಹಡಗು ಹತ್ತುವಾಗಲೇ ನಿಮ್ಮನ್ನು ಎಲ್ಲೋ ನೋಡಿದ್ದೇನೆ ಎಂದು ಗುರುತಿಸಿದೆ' ಎಂದರು. ಅಲೇವ್ 'ಹೌದು' ಎಂದರು. ಅವರ ನೆನಪಿನ ಶಕ್ತಿಯನ್ನು ಅಲೇವ್ ಅವರು ಮೆಚ್ಚಿಕೊಂಡರು.. ಮೊದಲ ನೋಟಕ್ಕೆ ಪರಸ್ಪರ ಒಬ್ಬರನ್ನೊಬ್ಬರು ಪ್ರೇಮಿಸಿದರು. ಮಧ್ಯೆ ತಾಯಿಯವರಿಗೆ ಪತ್ರ ಬರೆಯುತ್ತಾ 'ಹಡಗಿನಲ್ಲಿ ನಾನು ಕಂಡ ಏಕಮಾತ್ರ ಆಸಕ್ತಿಪೂರ್ಣ ವ್ಯಕ್ತಿ ಎಂದರೆ ಬಾಯ್ ಸ್ಕೌಟ್ ಮ್ಯಾನ್' ಎಂದು ಬರೆದರು. ಅಲೇವ್ ತಮ್ಮ ದಿನಚರಿಯಲ್ಲಿ ಬಿ.ಪಿಯವರ ಬಗ್ಗೆ ಹೀಗೆ ಬರೆದಿದ್ದಾರೆ. 'ಬಾಯ್ಸ್ ಸ್ಕೌಟ್ ಮ್ಯಾನ್ ತುಂಬಾ ಒಳ್ಳೆಯವರು. ರಸವತ್ತಾಗಿ ಮಾತನಾಡುತ್ತಾರೆ. ಮೇಫ್‌ಕಿಂಗ್ ಯುದ್ಧದ ಅನುಭವವನ್ನು ಚೆನ್ನಾಗಿ ಬಣ್ಣಿಸಿದರು.'

ಮಾತು ಮುಂದುವರಿದಂತೆ ಇಬ್ಬರ ಹುಟ್ಟುಹಬ್ಬವೂ ಫೆಬ್ರವರಿ 22 ಎಂದು ತಿಳಿದು ಆಶ್ಚರ್ಯಚಕಿತರಾದರು. 'ಅವರು ಹುಟ್ಟಿದ್ದು 1857 ನಾನು 1899. ನಮ್ಮ ವಯಸ್ಸಿನ ಅಂತರ ಕೇವಲ 32 ವರ್ಷ! ಆದರೂ ನಮ್ಮ ಮನೋಭಾವ, ಆಸಕ್ತಿಗಳು ತೀರಾ ಒಂದೇ ಆಗಿದ್ದವು.'

'ಹಡಗು ಇಳಿಯುವ ಮುನ್ನ ನಾವು ಜೀವನ ಸಂಗಾತಿಗಳಾಗ ಬೇಕೆನ್ನುವಷ್ಟರ ಮಟ್ಟಿಗೆ ಆತ್ಮೀಯತೆ ಬೆಳೆಯಿತು, ಅಂತೆ ನಿಶ್ಚಯಿಸಿಕೊಂಡೆವು' ಎಂದು ಹೇಳಿದ್ದಾರೆ. ಅಲೇವ್‌ರನ್ನು ಅಗಲಿದ ಮೇಲೆ ಬಿ.ಪಿಯವರು ಪ್ರವಾಸವನ್ನು ಮುಂದುವರಿಸಿದರು. ಆದರೆ ಮನದ ತುಂಬ ಅಲೇವ್ ತುಂಬಿದ್ದರು. ಆಗಾಗ್ಗೆ ಅಲೇವ್‌ರಿಗೆ ಬಿ.ಪಿಯವರು ಪತ್ರ ಬರೆಯುತ್ತಿದ್ದರು. ಆ ಪತ್ರಗಳಲ್ಲಿ ವಿವಿಧ ಭಂಗಿಯಲ್ಲಿ ರಾಬಿನ್ ಪಕ್ಷಿ ಬರೆದು ಸಹಿ ಮಾಡುತ್ತಿದ್ದರು. ಒಮ್ಮೆ ರೈಲಿನಲ್ಲಿ ಪ್ರಯಾಣಿಸುತ್ತಿದ್ದಾಗ ಗಾಢನಿದ್ರೆಯಲ್ಲಿದ್ದ ಬಿ.ಪಿಯವರನ್ನು ಅವರ ಸಹ ಪ್ರಯಾಣಿಕರಾಗಿದ್ದ ಲೇಡಿ ಬೆಸನ್‌ಕ್ವೆಟ್ 'ನೋಡಿ ಅಲೇವ್' ಎಂದು ಎಬ್ಬಿಸಿದಳು. ತಕ್ಷಣವೇ ಎದ್ದು ಎಲ್ಲಿ? ಎಲ್ಲಿ? ಎಂದರಂತೆ. ಅವರು ಎದುರಾಗಿದ್ದ ಅಲಿವ್ ಮರವನ್ನು ತೋರಿಸಿದರಂತೆ. ನಂತರ ಸರಿಯಾಗಿ ಎಚ್ಚರಗೊಂಡು ಬಿ.ಪಿಯವರು ಗುನುಗುನುಸಿದರಂತೆ, 'ನನ್ನ ಅಲೇವ್–ಮುದ್ದಿನ ಅಲೇವ್–ನನ್ನ ಮುದ್ದಿನ

ಅಲೇವ್' ಎಂದು ಬಿ.ಪಿಯವರು ಹೇಳಿದರಂತೆ.

ಅಲೇವ್‌ಳು ಬಿ.ಪಿಯವರನ್ನು ವಿವಾಹವಾಗುವ ವಿಚಾರ ತಂದೆ-ತಾಯಿಯವರಿಗೆ ಅಸಮಾಧಾನ ತಂದಿತ್ತು. ಆದರೂ ತಂದೆಯವರು ಬಿ.ಪಿ.ಯವರನ್ನು ಭೇಟಿಯಾಗಲು ಆಹ್ವಾನಿಸಿದರು. ಬಿ.ಪಿ.ಯವರು ಅವಸರದಲ್ಲಿ ತಯಾರಿ ನಡೆಸಿ ಬಂದರು. ಅವರ ಮನವೆಲ್ಲಾ ಅಲೇವ್ ಆವರಿಸಿದ್ದಳು. ಈ ಭೇಟಿಯ ಪರಿಣಾಮದ ಬಗ್ಗೆ ಆತಂಕವೂ ಇತ್ತು. 'ಸದಾ ಸಿದ್ಧ' ಎಂದು ಪ್ರಸಿದ್ಧರಾದ ಬಿ.ಪಿ.ಯವರು ಪ್ರೇಮದ ಉತ್ಕಟತೆಯಲ್ಲಿ ರೇಜರ್ ಅನ್ನೇ ಮರೆತು ಬಂದಿದ್ದರು. ಅವರಿಗೆ ನಮ್ಮ ಬಟ್ಲರ್ ಸಹಾಯ ಮಾಡಿದ. ನಂತರ ಷೇವ್ ಮಾಡಿಕೊಳ್ಳುವಾಗ ಗಾಯ ಮಾಡಿಕೊಂಡು ಅದಕ್ಕೆ ಪ್ಲಾಸ್ಟರ್ ಅಂಟಿಸಿಕೊಂಡು ಊಟದ ಮೇಜಿಗೆ ಬಂದು ಕುಳಿತುಕೊಳ್ಳಬೇಕಾಯಿತು. 20 ಸೆಪ್ಟೆಂಬರ್ 1912ರಂದು ಅವರಿಬ್ಬರ ನಿಶ್ಚಿತಾರ್ಥವಾಯಿತು. ನಂತರ ಡಾರ್‌ಸೆಟ್‌ನಲ್ಲಿರುವ ಸೇಂಟ್ ಪೀಟರ್ಸ್ ಚರ್ಚ್‌ನಲ್ಲಿ 30 ಅಕ್ಟೋಬರ್ 1912ರಂದು ವಿವಾಹ ನಡೆಯಿತು. 'ಅಲೇವ್ ಸೇಂಟ್ ಕ್ಲೇರ್ ಸೋಮ್ಸ್‌ರವರು ಅಲೇವ್ ಬೇಡನ್ ಪೊವೆಲ್ ಆದರು.'

ಅಲೇವ್ ಅವರು ವಿವಾಹದ ನಂತರ 'ಇದು ನಿಜವೇ? ನನ್ನ ಪ್ರಿಯತಮ ರಾಬಿನ್ ನಿಜಕ್ಕೂ ನನ್ನನ್ನು ಮದುವೆಯಾದರೆ? ಇಷ್ಟೊಂದು ದಿನಗಳ ನಂತರ ಅವರು ನನ್ನವರಾದರೆ? ನಾನು ಅವರವಳಾದೆನೇ? ಎಲ್ಲವೂ ಆಶ್ಚರ್ಯಕರ!' ಎಂದು ದಿನಚರಿಯಲ್ಲಿ ಬರೆದಿದ್ದಾರೆ.

ಸ್ಕೌಟ್‌ಗಳು ಬಿ.ಪಿ.ಯವರನ್ನು ಎಷ್ಟು ಆರಾಧಿಸುತ್ತಿದ್ದರೆಂದರೆ ಅವರನ್ನು ತಮ್ಮ ಸ್ವತ್ತು ಎಂದು ಭಾವಿಸಿದ್ದರು. ಅವರ ವಿವಾಹದ ಅಮಂತ್ರಣ ನೋಡಿ ಒಬ್ಬ ಸ್ಕೌಟ್ ಹೀಗೆ ಪತ್ರ ಬರೆದನ್ನು "ನಿಮ್ಮ ವಿವಾಹ ನಮಗೆ ಭಯಾನಕ ನಿರಾಶೆ ಉಂಟುಮಾಡಿದೆ.' ಬಿ.ಪಿಯವರು ಆ ಹುಡುಗನಿಗೆ ಮಾರುತ್ತರ ಬರೆದರು. 'ನನ್ನ ಪತ್ನಿಗೆ ಈ ಚಳವಳಿಯಲ್ಲಿ ನನ್ನಷ್ಟೇ ಆಸಕ್ತಿ ಇದೆ, ನನ್ನ ಕೆಲಸದಲ್ಲಿ ಅವಳು ಸಹಾಯ ಮಾಡುತ್ತಾಳೆ ಎಂಬ ನಂಬಿಕೆ ನನಗಿದೆ. ಆದ್ದರಿಂದ ನಮ್ಮ ವಿವಾಹ ನನ್ನನ್ನು ಸ್ಕೌಟಿಂಗ್‌ನಿಂದ ದೂರ ಮಾಡುವ ಬದಲು ಸ್ಕೌಟಿಂಗ್‌ಗೆ ಮತ್ತೋರ್ವ ಕ್ರಿಯಾಶೀಲ ಸದಸ್ಯರ ಸೇರ್ಪಡೆ ಮಾಡುತ್ತದೆ. ನಿಮಗೆ ಅವರ ಪರಿಚಯವಾದ ತಕ್ಷಣ ನೀವೆಲ್ಲಾ ಅವರನ್ನು ನನ್ನಂತೆ ತಕ್ಷಣವೇ ಪ್ರೀತಿಸಲಾರಂಭಿಸುತ್ತೀರಿ ಎಂಬ ನಂಬಿಕೆ ನನಗಿದೆ'.

ಒಂದು ಲಕ್ಷ ಸ್ಕೌಟ್ ಮಕ್ಕಳು ಒಂದೊಂದು ಪೆನ್ನಿಯನ್ನು ಹಾಕಿ ಸಂಗ್ರಹಿಸಿ ಆ ದಂಪತಿಗಳಿಗೆ 'ರೋಲ್ಸ್‌ರಾಯ್ಸ್' ಕಾರನ್ನು ಉಡುಗೊರೆಯಾಗಿ ನೀಡಿ, ಶುಭ ಕೋರಿದರು! ನಿರಾಸೆ ಹೊಂದಿದ ಸ್ಕೌಟ್ ಮಕ್ಕಳೂ ಈ ಕೊಡುಗೆಯಲ್ಲಿ ಭಾಗಿಯಾಗಿದ್ದರೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಬಿ.ಪಿ.ಯವರು ಈಗಾಗಲೇ ಸೈನ್ಯದಿಂದ ನಿವೃತ್ತರಾಗಿ ಪೂರ್ಣಾವಧಿ ಸ್ಕೌಟ್ ಚಳವಳಿಯ ಕಾರ್ಯದಲ್ಲಿ ತೊಡಗಿದ್ದರು. ಈ ಚಳವಳಿಯು ಅಂತರರಾಷ್ಟ್ರೀಯ ಮಟ್ಟದಲ್ಲಿ ಬೆಳೆಯುತ್ತಿತ್ತು. ಇವರು ಈ ಚಳವಳಿಯ ಮುಖ್ಯ ಆಯುಕ್ತರಾಗಿದ್ದರು. ಇವರ ತಂಗಿ ಅಗ್ನೇಸ್ ಬಿ.ಪಿ.ಯವರು ಮೊದಲು ಅಧ್ಯಕ್ಷರಾಗಿ ಶಿಶು ಗರ್ಲ್ ಗೈಡ್‌ನ್ನು ಸದೃಢವಾಗಿ ಪೋಷಿಸಿದರು. ಅವರ ನಂತರ ಕ್ವೀನ್ ಮೇರಿಯವರು ಅಧ್ಯಕ್ಷರಾದರು. 1918ರಲ್ಲಿ ಅಲೇವ್ ಬಿ.ಪಿ.ಯವರು ಇಂಗ್ಲೆಂಡಿನ ಗೈಡ್ ಚಳವಳಿಯ ಅಧ್ಯಕ್ಷರಾದರು. ಅಗ್ನೇಸ್ ಬಿ.ಪಿ. ಯವರು ಉಪಾಧ್ಯಕ್ಷರಾಗಿ. ಈ ಕಾರ್ಯಕರ್ತರ ನೆರವಿಗೆ ಅಲೇವ್ ಅವರು ಸೇರ್ಪಡೆಯಾದರು.



1913ರಲ್ಲಿ ಲಾರ್ಡ್ ಮತ್ತು ಲೇಡಿ ಬಿ.ಪಿ.ಯವರಿಗೆ ವಿವಾಹದ ಉಡುಗೊರೆ ಸ್ಕೌಟ್‌ಗಳಿಂದ

# ಸ್ಮೃತಿ : 6

## ಅಲೇವ್ ಕೌಟುಂಬಿಕ ಜೀವನ

ವಿವಾಹದ ನಂತರ ನಮಗೆ ವೈಯಕ್ತಿಕ ಸಮಯ ಲಭಿಸಿದ್ದು ಒಂದೇವಾರ. ನಮಗಾಗಿ ಅನೇಕ ಸ್ಕೌಟ್ ಕಾರ್ಯಕ್ರಮ ಮತ್ತು ರ್‍ಯಾಲಿಗಳನ್ನು ಆಯೋಜಿಸಲಾಗಿತ್ತು. ನಮಗೆ ಎಲ್ಲೆಲ್ಲೂ ಭವ್ಯ ಸ್ವಾಗತ ದೊರೆಯಿತು. ನನಗೆ ರೋಮಾಂಚಕ ಅನುಭವವಾಯಿತು. ಬಹಳ ಹೆಮ್ಮೆ ಎನ್ನಿಸಿತು. ನನಗೆ ನನ್ನ ರಾಬಿನ್ ಪ್ರಸಿದ್ಧ ಪುರುಷನೆಂದು ತಿಳಿದಿತ್ತು. ಆದರೆ ಇಷ್ಟೊಂದು ಸುಪ್ರಸಿದ್ಧನೆಂದು ತಿಳಿದಿದ್ದು ವಿವಾಹದ ನಂತರವೇ. ಎಂತಹ ಅದ್ಭುತ ರಾಷ್ಟ್ರನಾಯಕ! ನನ್ನ ಜೀವನ ಶ್ರೀಮಂತಿಕೆಯಿಂದ ಉನ್ನತ ಮಧ್ಯಮವರ್ಗಕ್ಕೆ ಮಾರ್ಪಾಡಾಯಿತು. ಎಲ್ಲರೊಡನೆ ಸಾಮಾಜಿಕವಾಗಿ ಬೆರೆಯುವ ಅವಕಾಶ ಲಭಿಸಿತು.

ನಾನು 28 ನವೆಂಬರ್ ದಿನಚರಿಯಲ್ಲಿ ಹೀಗೆ ಬರೆದೆ.... ಚಿಕ್ಕಂದಿನಿಂದಲೂ ನನ್ನ ತಂದೆ–ತಾಯಿಗಳ ಪ್ರೀತಿಯನ್ನು ಆನಂದಿಸಿದ್ದೆ. ಆದರೆ ನನ್ನ ಪ್ರಿಯತಮನ ಪ್ರೀತಿಯನ್ನು ಅದರ ಅದ್ಭುತತೆಯನ್ನು ಊಹಿಸಿಯೂ ಇರಲಿಲ್ಲ.

ನನ್ನ ಸಂಸಾರ ನನ್ನ ಅತ್ತೆಯ ಮನೆಯ ಹತ್ತಿರ ರಟ್‌ಲ್ಯಾಂಡ್ ಕೋರ್ಟ್‌ನಲ್ಲಿ ಪ್ರಾರಂಭವಾಯಿತು. ರಾಬಿನ್ ನನ್ನನ್ನು ನಾಯಿ ಡೂಗಿಯ ಜೊತೆ ಕಂಡ ಹೈಡ್‌ಪಾರ್ಕ್ ಇದಕ್ಕೆ ಹತ್ತಿರವಾಗಿತ್ತು. ನನ್ನ ಅಜ್ಜಿ ನನಗೆ ನನ್ನ ಉಡುಗೊರೆಯಾಗಿ ನನ್ನ ಭಾವಚಿತ್ರ ಬರೆಸುತ್ತಿದ್ದ ಕಲಾಕಾರನ ಮನೆಯೂ ಹತ್ತಿರವಾಗಿತ್ತು. ಈಗಲೂ ಅದು ಫಾಕ್ಸ್‌ಲೀಸ್ ಗೈಡ್ ತರಬೇತಿ ಕೇಂದ್ರದ ಗೋಡೆಯ ಮೇಲೆ ತೂಗಾಡುತ್ತಿದೆ. ಇನ್ನೆರಡು ನನ್ನದು ಮತ್ತು ಬಿ.ಪಿ.ಯವರದು, ಸಮವಸ್ತ್ರ ಧರಿಸಿದ ಭಾವಚಿತ್ರ.

ರಾಬಿನ್‌ರವರಿಗೆ ಹುಷಾರಿರಲಿಲ್ಲ. ಸತತವಾಗಿ ಚಳವಳಿಯ ಪ್ರಸಾರ, ಸಂಘಟನೆ, ಬಲವರ್ಧನೆಗಾಗಿ ಪ್ರವಾಸ ಮಾಡಿ ಬಳಲಿದ್ದರು. ತಾನು ಸೈನಿಕನಾದಾಗಿನಿಂದಲೂ ಸ್ಕೌಟಿಂಗ್‌ನ್ನು ಅಭಿವೃದ್ಧಿಗೊಳಿಸುತ್ತಾ ಬಂದರು. ವಿಶ್ರಾಂತಿಯಲ್ಲೂ ಅದೇಚಿಂತನೆ ಅದೇ ಕೆಲಸ. ಅವರು ಪರಿವರ್ತನಾ ಶೀಲತೆ, ಸರ್ವತೋಮುಖ ಪ್ರಜ್ಞೆ, ಸರ್ವಕಾರ್ಯ ಚತುರತೆಗೆ ಪ್ರಸಿದ್ಧರಾಗಿದ್ದರು. ಕಲಾಕರ, ಬರಹಗಾರ, ಅಭಿನಯಪಟು, ಸೈನಿಕ... ಅವರು ಅನೇಕ ಪುಸ್ತಕಗಳನ್ನು ವರ್ಣಚಿತ್ರಗಳನ್ನು ಸಮಯ ಸಿಕ್ಕಾಗಲೆಲ್ಲಾ ಬರೆಯುತ್ತಿದ್ದರು.

ಬಹಳ ನಿಧಾನವಾಗಿ ವಿವಾಹಕೂಟ ಏರ್ಪಡಿಸಿದರು. ಮದುವೆ ಸರಳವಾಗಿತ್ತು. ಈ ಭವ್ಯವಾದ ಉಡುಗೊರೆಯನ್ನು 17 ಮೇ 1913 ರಂದು ಮೇಫ್‌ಕಿಂಗ್ ಗೆಲುವಿನ ವಾರ್ಷಿಕೋತ್ಸವದ ಅಂಗವಾಗಿ ನೀಡಲಾಗಿತ್ತು.

ನಾವು ಸಹಾರ ಮರುಭೂಮಿಗೆ ಅನ್ವೇಷಣಯಾನ ಹೊರಟೆವು. ನಮಗೆ ಎರಡು ಒಂಟೆಗಳು ಮತ್ತು ಅರಬ್ ಮಾರ್ಗದರ್ಶಕರು ಸಹಾಯ ಮಾಡಿದರು. ಮರಳುಗಾಡಿನ ಯಾನದ ಅನುಭವ ರೋಚಕವಾಗಿತ್ತು. ಬಿ.ಪಿ.ಯವರು ಒಮ್ಮೆ ಪಾರ್ಕ್‌ಸ್ಟೋನ್‌ನಲ್ಲಿ ಭಾಷಣ ಮಾಡುವಾಗ ಹೀಗೆ ಹೇಳಿದರು 'ಇದ್ದದ್ದು ಒಂದೇ ಕೈಬಟ್ಟಲು, ಮೀನು ಹುರಿದು ಅದನ್ನು ತಿಕ್ಕಿತಿಕ್ಕಿ ಸ್ವಚ್ಛ ಮಾಡುತ್ತಿದ್ದಳು. ಅದರಲ್ಲೇ ಕಾಫಿಯೂ ತಯಾರಾಗುತ್ತಿತ್ತು. ಅವಳೇ ಬಟ್ಟೆ ಒಗೆದು ಇಸ್ತ್ರೀ ಮಾಡುವಳು. ನಾನೊಮ್ಮೆ ಈ ಕೆಲಸ ಮಾಡಹೋಗಿ ಷರ್ಟನ್ನು ಕಂದುಬಣ್ಣ ಮಾಡಿದೆ, ಅದು ಇಸ್ತ್ರೀ ಪೆಟ್ಟಿಗೆಗೆ ಅಂಟಿತು.' ನಂತರ ಮಾಲ್ಟಾಗೆ ಹೋದೆವು. ಅರಮನೆಯಲ್ಲಿದ್ದು ಪ್ರಧಾನ ಸ್ಕೌಟ್ ಅನ್ನು ಭೇಟಿಯಾಗಿ ಬಂದೆವು. ನಂತರ ತಾಯಿಯಾಗುವ ಸರತಿ ಪ್ರಾರಂಭವಾಯಿತು. ಪೀಟರ್, ಹೀದರ್ ಮತ್ತು ಬೆಟ್ಟಿ ಹುಟ್ಟಿದರು. ಅವರ ಲಾಲನೆ ಪಾಲನೆಯಲ್ಲಿ ರಾಬಿನ್ ಜೊತೆ ಪ್ರವಾಸ ಮಾಡಲಿಲ್ಲ. ಅವರ ಪ್ರವಾಸ ನಡೆದೇ ಇತ್ತು. ಮನೆಯಲ್ಲೇ ಇದ್ದು ಟೈಪ್‌ರೈಟರ್ ಕೊಂಡು ಕಲಿತು ಅವರಿಗೆ ಚಳವಳಿಯ ಕೆಲಸದಲ್ಲಿ ಸಹಾಯ ಮಾಡುತ್ತಿದ್ದೆ.

ನನ್ನ ಪ್ರಾಣ ಸ್ನೇಹಿತೆ ಸೈಬೆವರ್ ಬಂದು ನಮ್ಮಲ್ಲಿ ಇದ್ದಳು. ಅವಳು ಹೇಳಿದ ಭವಿಷ್ಯ ನಿಜವಾಗಿತ್ತು. ನಾನು ಸೈನಿಕನನ್ನು ಮದುವೆಯಾಗಿದ್ದೆ. ನನಗೆ ಮೂರು ಮಕ್ಕಳಾಗಿದ್ದರು. ನಾನೊಬ್ಬ ವ್ಯಕ್ತಿಯಾಗಿ ಬೆಳೆದಿದ್ದೆ.

ಪ್ರಿನ್ಸ್ ಅಲೆಕ್ಸಾಂಡರ್ ಜೊತೆ ಹೋಗಿ ನಾನೊಂದು ಸ್ಕೌಟ್-ಗೈಡ್ ವಸ್ತು ಪ್ರದರ್ಶನವನ್ನು ಉದ್ಘಾಟಿಸಿದೆ. 'ಸಂಪೂರ್ಣ ಮನುಷ್ಯನಾಗಲು ಸ್ಕೌಟಿಂಗ್ ನೀಡುವ ಕೊಡುಗೆಗಳನ್ನು ನೋಡಿ ಅಚ್ಚರಿಪಟ್ಟೆ. ಸಾರ್ವಜನಿಕ ಪ್ರದರ್ಶನ ನೋಡಲು ನುಗ್ಗಿಬಂದರು. ಯುವಕರಿಗೆ ತರಬೇತಿ ನೀಡುತ್ತಿರುವ ಸ್ಕೌಟಿಂಗ್‌ನಂತರ ಮತ್ತೊಂದು ಕಾರ್ಯಕ್ರಮವಿಲ್ಲ' ಎಂದು ಪ್ರಶಂಸಿದರು. 1914 ರಿಂದ ರ್‍ಯಾಲೀಸ್ ಮತ್ತು ಕಾನ್‌ಫರೆನ್ಸ್‌ಗಳಲ್ಲಿ ಭಾಗವಹಿಸಲು ಆರಂಭಿಸಿದೆ. ಪತ್ರಿಕೆಗಳಲ್ಲಿ ನನ್ನ ಭಾವಚಿತ್ರ ಬರಹಗಳು ಮುದ್ರಿತವಾದವು. ನಾಚಿಕೆಯಿಂದ ಕೂಡಿದ ಅಲೇವ್ ಈಗ ಸಾರ್ವಜನಿಕ ಭಾಷಣ ಮಾಡುತ್ತಿದ್ದರು. ನನ್ನ ಆತ್ಮವಿಶ್ವಾಸ ಹೆಚ್ಚುತ್ತಾ ಹೋಯಿತು.

ಆದರೂ ನಾನು ನನ್ನನ್ನು ನನ್ನ ಪತಿಗೆ ಸಮರ್ಪಿಸಿಕೊಂಡಿದ್ದೆ. ಅವರಿಂದ ಅವರ ಜೀವನದಿಂದ ಅವರೊಡನೆ ಇರುವುದನ್ನು ಬಿಟ್ಟು ಮತ್ತೇನನ್ನೂ ಆಶಿಸುತ್ತಿರಲಿಲ್ಲ. ಅವರ ಜೊತೆ ದೇಶ ವಿದೇಶಗಳಿಗೆ ಹೋಗುತ್ತಿದ್ದೆ. ಯುದ್ಧ ಭೂಮಿಗೂ ಅವರೊಡನೆ ತೆರಳಿ ಫ್ರಾನ್ಸ್‌ನಲ್ಲಿ ನಡೆಯುತ್ತಿದ್ದ ಯುದ್ಧದ ಭೂಮಿಗೆ ಬಿ.ಪಿ.ಯವರೊಡನೆ ಹೊರಟೆ. ಅಲ್ಲಿನ YMCA ಕಾರ್ಯ ಪ್ರಭಾವಪೂರ್ಣವಾಗಿತ್ತು. ಅಲ್ಲಲ್ಲಿ ಗುಡಿಸಲು ಕಟ್ಟಿ ಸ್ಕೌಟಿಂಗ್ ಚಳವಳಿಯ ಮಹಿಳೆ ಮತ್ತು ಪುರುಷರನ್ನು ಸ್ವಯಂ ಸೇವಕರಾಗಿ ನೇಮಕ ಮಾಡಿಕೊಂಡರು,, ಅದರಲ್ಲಿ ನಾನು ಒಬ್ಬಳು. ನಾನು ಸ್ಟೆಲ್ಲಾ ಆಷ್‌ಬನ್ 'ಬಾರಮೇಡ್ಸ್', ಡಿಸ್‌ಪೆನ್‌ಸರಿ ನಡೆಸುತ್ತಿದ್ದೆವು. ಕೊಕೊ ಮತ್ತು ಸಿಗರೇಟ್ ಮಾರುತ್ತಿದ್ದೆವು. ಸೈನಿಕರಿಗಾಗಿ ಮಾಡುತ್ತಿದ್ದ ಸೇವೆ ಕಷ್ಟಕರವಾಗಿತ್ತು. ನನ್ನ ವಿವಾಹ ವಾರ್ಷಿಕೋತ್ಸವ ಬಂದಿತು. ಆದರೆ ಯುದ್ಧದ ಕೆಲಸ ಬಿಟ್ಟು ಹೋಗುವ ಮನಸ್ಸಿರಲಿಲ್ಲ. ಮೊದಲಬಾರಿಗೆ ಒಳ್ಳೆ ಕೆಲಸ ಮಾಡುತ್ತಿದ್ದೇನೆ ಎನ್ನಿಸಿತು. ಸೈನಿಕರಿಗಾಗಿ ವಯೋಲಿನ್ ನುಡಿಸಿದೆ, ಸಂಗೀತಕೂಟ ಏರ್ಪಡಿಸಿದೆ. ಅವರೆಲ್ಲಾ ತಮ್ಮ ತಮ್ಮ ಮನೆಯನ್ನು ನೆನೆಸಿಕೊಂಡು ಬೇಸರಪಟ್ಟುಕೊಳ್ಳಬಹುದು. ಮತ್ತೊಂದು YMCA ಗುಡಿಸಿಲಿಗೆ ಬೇಡಿಕೆ ಬಂತು. ಗುಡಿಸಲು ತೆಗೆದೆವು. ಆದರೆ ಮೊದಲ ದಿನವೇ ನೀರಿಲ್ಲ, ಆಹಾರವಿಲ್ಲ. ಪ್ರತಿದಿನ ಒಂದು ಗಂಟೆ ಮಾತ್ರ ಯುದ್ಧಮುಕ್ತ ಸಮಯವಿತ್ತು. ಏನು ಸಿಕ್ಕಿತೋ, ಯಾವಾಗ ಸಿಕ್ಕಿತೋ ಆಗ ತಿಂದೆವು. ಅನೇಕ ತಿಂಗಳ ಮೇಲೆ ಮನೆಗೆ ಹೋದೆ. ನಮ್ಮ ಮಕ್ಕಳು ನಮ್ಮನ್ನು ಪ್ರೀತಿಯಿಂದ ಸ್ವಾಗತಿಸಿದರು.

ಮಕ್ಕಳನ್ನು ವಸತಿ ಶಾಲೆಗೆ ಸೇರಿಸಿದೆವು. ಅವರಿಗೆ ಎಲ್ಲಾ ಸೌಕರ್ಯ ನೀಡಿದೆವು. ಅವರಿಗೆ ನಮ್ಮ ಪ್ರೀತಿಯ ಕೊರತೆಯಾಗದಂತೆ ರಜೆಯಲ್ಲಿ ಮಜ ಮಾಡಿಸಿ ಅವರನ್ನು ಮರಳಿ ಶಾಲೆಗೆ ಕಳುಹಿಸುತ್ತಿದ್ದೆವು.

ದೇಶ ವಿದೇಶಗಳಲ್ಲಿ ಚಳವಳಿಯು ವೇಗವಾಗಿ ಬೆಳೆಯುತ್ತಿತ್ತು. ಪ್ರವಾಹದಂತೆ ಪ್ರಸಾರವಾಗುತ್ತಿತ್ತು. ಸಾವಿರಾರು ಯುವಕರು ಲವಲವಿಕೆಯಿಂದ, ಉತ್ಸಾಹದಿಂದ 'ಸೇವೆಗಾಗಿ' ತಮ್ಮನ್ನು ಸಮರ್ಪಿಸಿಕೊಳ್ಳುತ್ತಿದ್ದರು. ರಾಷ್ಟ್ರದಲ್ಲಿ ಯುವಕರಿಗೆ ತರಬೇತಿ ನೀಡಲು ಜಾಗೃತಗೊಳಿಸಲು ಇದು ಸಕಾಲವಾಗಿತ್ತು

1919 ರಲ್ಲಿ ಅಕ್ಕ ಆರಿಯಲ್ ದೈವಾಧೀನರಾದರು. ಭಾವನಿಗೆ ಪ್ರವಾಸೀ ಉದ್ಯೋಗವಿದ್ದುದರಿಂದ ಅವರ ಮಕ್ಕಳ ಜವಾಬ್ದಾರಿಯನ್ನು ಅಲೇವ್ ಅವರು ತೆಗೆದುಕೊಂಡರು ಕ್ರಮೇಣ ತಾಯಿಯವರನ್ನು ತಮ್ಮೊಡನೆ ಇರಿಸಿಕೊಂಡು

ಸಲಹಿದರು. ಅವರ ಮನೆ ಯಾವಾಗಲೂ ಸಂತಸದ ಬೀಡು! ಬಂಧುಗಳು, ಸ್ನೇಹಿತರು ಸ್ಕೌಟಿಂಗ್-ಗೈಡಿಂಗ್ ಸೋದರ-ಸೋದರಿಯರು ಯಾವುದೇ ಅಡ್ಡಿ ಆತಂಕಗಳಿಲ್ಲದೇ ಬಂದು ಹೋಗುತ್ತಿದ್ದರು. ದಂಪತಿಗಳು ಅವರೆಲ್ಲರನ್ನೂ ಸ್ವಾಗತಿಸುತ್ತಿದ್ದರು. ಮರೆಯಾಲಾರದ ಆತಿಥ್ಯ ನೀಡುತ್ತಿದ್ದರು. ಸಮಸ್ಯೆ ಹೊತ್ತುಬಂದವರಿಗೆ ಸಲಹೆ ನೀಡುತ್ತಿದ್ದರು, ಸಹಾಯ ಮಾಡುತ್ತಿದ್ದರು. ಅವರ ಮಗಳಾದ ಬೆಟ್ಟಿ ತಂದೆತಾಯಿಯರನ್ನು ನೆನಪಿಸಿಕೊಳ್ಳುತ್ತಾ 'ಅವರೆಂದೂ ಒಬ್ಬರೊಡನೆ ಒಬ್ಬರು ಜಗಳವಾಡಿದ್ದನ್ನು ನಾನು ಕಂಡಿಲ್ಲ ಎನ್ನುತ್ತಾಳೆ.'



ಅಲೇವ್ ಅವರಿಗೆ ಕ್ರಿಸ್‌ಮಸ್ ಹಬ್ಬವೆಂದರೆ ಎಲ್ಲಿಲ್ಲದ ಸಂತಸ, ಉತ್ಸಾಹ. ಅವರು ತಮ್ಮ ಪತಿಯೊಡನೆ ಹಳ್ಳಿಗೆ ಹೋಗಿ ಮನೆಮನೆಯ ಬಾಗಿಲಿನಲ್ಲೂ ಉಡುಗೊರೆಯ ಪೊಟ್ಟಣವನ್ನು ಇಟ್ಟುಬರುತ್ತಿದ್ದರು. ಹಬ್ಬವನ್ನು ಶುಭಕೋರುವ ಮೂಲಕ ಸಿಹಿಹಂಚುವ ಮೂಲಕ ಎಲ್ಲರೊಡನೆ ಸಂಭ್ರಮದಿಂದ ಬೆರೆತು ಆದರಿಸುತ್ತಿದ್ದರು.

ಮಕ್ಕಳು ಬೆಳೆದು ಓದುಮುಗಿಸಿ ಉದ್ಯೋಗಸ್ಥರಾದಂತೆ ಅವರಿಗೆ ಮೊಮ್ಮಕ್ಕಳು ಜನಿಸಿದರು. ಅವರ ವಿಪರೀತ ಚಟುವಟಿಕೆಯಲ್ಲೂ ಮಕ್ಕಳು-ಮೊಮ್ಮಕ್ಕಳೊಡನೆ ಆನಂದಿಸವುದನ್ನು ತಪ್ಪಿಸುತ್ತಿರಲಿಲ್ಲ. ಬಿ.ಪಿ ದಂಪತಿಗಳು ಸಂತಸವು ನಮ್ಮಲ್ಲಿರುವ ವಸ್ತುಗಳಿಂದ ಲಭಿಸುವುದಿಲ್ಲ, ಆದರೆ ನಮ್ಮಲ್ಲಿರುವುದನ್ನು ಕೊಡುವುದರಿಂದ, ಹಂಚಿಕೊಳ್ಳುವುದರಿಂದ ದೊರೆಯುತ್ತದೆ ಎಂದು ನಂಬಿದ್ದರು.



ಲಾರ್ಡ್ ಬಿ.ಪಿ. ಮತ್ತು ಅಲೇವ್ ಬಿ.ಪಿ.



1923 – ಮಕ್ಕಳಾದ ಹೀಥರ್, ಪೀಠರ್ ಮತ್ತು ಬೆಟ್ಟಿಯೊಡನೆ ಲಾರ್ಡ್ ಮತ್ತು ಲೇಡಿ ಬಿ.ಪಿ. ಅಲೇವ್ ಕುಟುಂಬ



ಅಲೇವ್‌ರ ಕುಟುಂಬ

# ಸ್ಮೃತಿ : 7

## ಅಲೇವ್ ಮತ್ತು ಸ್ಕೌಟ್-ಗೈಡ್ ಚಳವಳಿ

ಪ್ರಾರಂಭದಲ್ಲಿ ಅಲೇವ್‌ಗೆ ಲೇಡಿ ಮಾಸ್ಟರ್ ಆಗಿ ಸ್ಕೌಟ್ ಟ್ರೂಪ್ ನಡೆಸಬೇಕೆಂಬ ಅಭಿಲಾಷೆ ಇತ್ತು. 1913ರಲ್ಲಿ ಅಲೇವ್ ಅವರು 1ನೇ ಎಫರಸ್ಟ್ ಸ್ಕೌಟ್ ಟ್ರೂಪ್ ಸಸೆಕ್ಸ್‌ನಲ್ಲಿ ಕೆಲಸ ಮಾಡಿದಳು. ಆದರೆ ಪತಿಯನ್ನು ಬೇಡಿಕೆಯ ಮೇರೆಗೆ ಗರ್ಲ್ ಗೈಡ್‌ಗೆ ಸೇವೆ ಸಲ್ಲಿಸಲಾರಂಭಿಸಿದಳು. ಮೊದಮೊದಲು ಹಿರಿಯ ಮಹಿಳೆಯರು. ಅನನುಭವಿ ಕಿರಿಯ ವಯಸ್ಸಿನ ಹುಡುಗಿ ಏನು ಮಾಡಿಯಾಳು ಎಂದುಕೊಂಡು ತಾತ್ಸಾರ ಮಾಡಿದರು. ಆದರೆ 'ದೇವರಿಗೆ ನನ್ನಿಂದ ಈ ಕೆಲಸ ಮಾಡಿಸಬೇಕೆಂದರೆ ಖಂಡಿತಾ ಈ ದಾರಿಯಲ್ಲಿ ಬರುವ ತೊಡರುಗಳನ್ನು ನಿವಾರಿಸುತ್ತಾನೆ' ಎಂದು ನಂಬಿದಳು. ಅಂತೆಯೇ ತನ್ನನ್ನು ಚಳವಳಿಯಲ್ಲಿ ಬದ್ಧತೆಯಿಂದ ತೊಡಗಿಸಿಕೊಂಡಳು. ಅವರ ಕಾರ್ಯದಕ್ಷತೆ ಕಂಡು 1916ರಲ್ಲಿ ಅಲೇವ್‌ರವರನ್ನು ಅಲ್ಲಿನ ಗೈಡ್ ಸಂಸ್ಥೆ ಸಸೆಕ್ಸ್ ಜಿಲ್ಲೆಯ ಆಯುಕ್ತರನ್ನಾಗಿ ನೇಮಕಮಾಡಿತು. ಅವರು ಗೈಡಿಂಗ್ ಸಂದೇಶ ಮತ್ತು ಧ್ಯೇಯೋದ್ದೇಶಗಳನ್ನು ಹೊತ್ತು ಪ್ರಸಾರ ಮಾಡುತ್ತಾ ಬ್ರಿಟನ್ನಿನ ಉದ್ದಗಲಕ್ಕೂ ಸಂಚರಿಸಿದರು. ಚಳವಳಿಯನ್ನು ನಿರೀಕ್ಷೆಗೂ ಮೀರಿ ವ್ಯಾಪಕವಾಗಿ ಬೆಳೆಸಿದರು. ಅವರು ಎಲ್ಲರೊಡನೆ ಸ್ನೇಹದಿಂದ ಬೆರೆಯುತ್ತಿದ್ದರು. ಅವರ ಸ್ನೇಹಕ್ಕೆ ಯಾವ ಭೇಧಭಾವಗಳೂ ಇರಲಿಲ್ಲ. ಅರಮನೆಯ ಬುಲ್‌ಬುಲ್ಸ್‌ಗಳನ್ನು ಕಾಣುವಷ್ಟೇ ಪ್ರೀತಿಯಿಂದ, ಸ್ನೇಹದಿಂದ ಕೊಳಚೆ ಪ್ರದೇಶದ ಬುಲ್‌ಬುಲ್ಸ್ ಮಕ್ಕಳನ್ನೂ ಕಾಣುತ್ತಿದ್ದರು. ಅವರ ಹಸನ್ಮುಖ ವ್ಯಕ್ತಿತ್ವಕ್ಕೆ ಎಲ್ಲರೂ ಮೊದಲ ನೋಟಕ್ಕೆ ಆಕರ್ಷಿತರಾಗುತ್ತಿದ್ದರು. ಅವರಿಗೆ ಚಳವಳಿಯ ಬಗ್ಗೆ ಅಪಾರ ಕಾಳಜಿ ಇತ್ತು. ಚಳವಳಿಗೆ ನಾಯಕಿಯರನ್ನು ನೇಮಕ ಮಾಡುವಾಗ ಚೆನ್ನಾಗಿ ಪರಿಶೀಲಿಸಿ ನೇಮಕ ಮಾಡಿದರು. ಅವರ ಕಾರ್ಯದಕ್ಷತೆಯನ್ನು ಮೆಚ್ಚಿ ಅವರನ್ನು 1918ರಲ್ಲಿ ಇಂಗ್ಲೆಂಡಿನ ಪ್ರಧಾನ ಗರ್ಲ್‌ಸ್ಕೌಟ್-ಗರ್ಲ್‌ಗೈಡ್ ಆಯುಕ್ತರನ್ನಾಗಿ ನೇಮಕ ಮಾಡುತ್ತಿದ್ದರು. ಅದೇ ವರ್ಷ ಅಲೇವ್ ಅವರ ತಂದೆಯವರು ಶಾಂತಿಧಾಮ ವನ್ನು (Pax lodge) ಉಡುಗೊರೆಯಾಗಿ ನೀಡಿದರು. ಅವರು 'ಗರ್ಲ್ ಗೈಡ್ ಚಳವಳಿ ಮತ್ತು ಬಾಲಕಿಯರಿಗೆ ತರಬೇತಿ' ಎಂಬ ಪುಸ್ತಕವನ್ನು ಬರೆದು

ಪ್ರಕಟಿಸಿದರು. 1918ರಲ್ಲಿ ಅಲೇವ್ ಅವರನ್ನು ಇಂಗ್ಲೆಂಡಿನ ಪ್ರಧಾನ ಆಯುಕ್ತೆಯಾಗಿ ನೇಮಕ ಮಾಡಿದರು. ಪ್ರಾರಂಭಿಕ ದಿನಗಳಲ್ಲಿ ಗೈಡ್ ಚಳವಳಿಯು ಕೇವಲ ಆಸಕ್ತಿಯಿಂದಾಗಿ ದೇಶ–ವಿದೇಶಗಳಲ್ಲಿ ಒಂದು ವ್ಯವಸ್ಥೆಯಿಲ್ಲದೆ ಮನಬಂದಂತೆ ಬೆಳೆಯಿತು. ಇದನ್ನು ಗಮನಿಸಿದ ಅಲೇವ್ 1919ರಲ್ಲಿ 'ಸಮುದ್ರದಾಚೆಯ ಮಂಡಳಿ'ಯನ್ನು ರಚಿಸಿದರು.

1920ರಲ್ಲಿ ಆಕ್ಸ್‌ಫರ್ಡ್‌ನಲ್ಲಿ ಮೊದಲ ವಿಶ್ವ ಗೈಡ್ ಸಮ್ಮೇಳನ ನಡೆಸಿದರು.

1921ರಲ್ಲಿ ಚಳವಳಿಯನ್ನು ಒಟ್ಟುಗೂಡಿಸಿ ಬಲಬಡಿಸುವ ಸಲುವಾಗಿ ಬಿ.ಪಿ.ಯವರೊಡನೆ ಭಾರತಕ್ಕೆ ಭೇಟಿ ನೀಡಿದರು.

1923ರಲ್ಲಿ ಫಾಕ್ಸ್‌ಲೀಸ್‌ನಲ್ಲಿ ಮೊದಲ ಗೈಡ್ ಶಿಕ್ಷಕಿಯರ ತರಬೇತಿ ನಡೆಸಿದರು.

1924ರಲ್ಲಿ ಅಂತರರಾಷ್ಟ್ರೀಯ ಶಿಬಿರವನ್ನು ಫಾಕ್ಸ್‌ಲೀಸ್‌ನಲ್ಲಿ ನಡೆಸಿದರು. ಇದರಲ್ಲಿ 40 ರಾಷ್ಟ್ರಗಳು ಭಾಗವಹಿಸಿದ್ದವು.

1926ರಲ್ಲಿ ನ್ಯೂಯಾರ್ಕ್‌ನಲ್ಲಿ ವಿಶ್ವಸಮ್ಮೇಳನ ನಡೆಯಿತು. ಅಲೇವ್ ಅವರ ಗೌರವಾರ್ಥವಾಗಿ 22ಫೇಬ್ರವರಿಯನ್ನು 'ಚಿಂತನ ದಿನಾಚರಣೆ' ಎಂದು ವಿಶ್ವದಾದ್ಯಂತ ಆಚರಿಸಲು ನಿರ್ಣಯ ಕೈಗೊಳ್ಳಲಾಯಿತು. ಅಂದೇ ಬಿ.ಪಿ.ಯವರ ಹುಟ್ಟುಹಬ್ಬ ಎಂಬುದನ್ನು ಮರೆಯುವಂತಿಲ್ಲ. ಸ್ಕೌಟ್ಸ್–ಗೈಡ್ಸ್‌ಗಳು ಇಂದಿಗೂ ಇವರೀರ್ವರ ಹುಟ್ಟುಹಬ್ಬವನ್ನು ಜನ್ಮ ದಿನಾಚರಣೆಯಾಗಿ ವಿಶ್ವದಾದ್ಯಂತ ಆಚರಿಸುತ್ತಿದ್ದಾರೆ.

1928ರಲ್ಲಿ ಸಮುದ್ರದಾಚೆಯ ಮಂಡಳಿಯ ಸಹಾಯದಿಂದ ಅಲೇವ್ ಬಿ.ಪಿ.ಯವರು 'ವಿಶ್ವ ಗರ್ಲ್ ಗೈಡ್ ಮತ್ತು ಗರ್ಲ್ ಸ್ಕೌಟ್ ಸಂಸ್ಥೆಯನ್ನು – World Association of Girl Guide and Girl Scouts (WAGGGS) ಲಂಡನ್ನಿನಲ್ಲಿ ಸ್ಥಾಪಿಸಿದರು. ಈ ಸಂಸ್ಥೆಯ ಸಂಸ್ಥಾಪಕ ರಾಷ್ಟ್ರಗಳಲ್ಲಿ ನಮ್ಮ ಭಾರತವೂ ಒಂದಾಗಿದೆ ಎಂಬುದು ಹೆಮ್ಮೆಯ ಸಂಗತಿ. ಲಾರ್ಡ್ ಮತ್ತು ಲೇಡಿ ಬಿ.ಪಿ.ಯವರು 1930 ಡಿಸೆಂಬರ್ ಲಂಡನ್ನಿನಲ್ಲಿ

'ಗರ್ಲ್‌ಗೈಡ್ ಮತ್ತು ಬಾಯ್ಸ್ ಸ್ಕೌಟ್' ಎಂಬ ನಾಮಫಲಕ ಹೊಂದಿರುವ ಎರಡು ರೈಲುಗಳನ್ನು ಯುಸ್ಟನ್ ಸ್ಟೇಷನ್ ಲಂಡನ್ನಿನಲ್ಲಿ ಉದ್ಘಾಟಿಸಿದರು. ಆ ಎರಡೂ ರೈಲುಗಳು ಚಲಿಸುತ್ತಾ ಈ ಚಳವಳಿಯ ಇರುವಿಕೆಯನ್ನು ಸಾರಿದವು. 1930ರಲ್ಲಿ ಅಲೇವ್ ಅವರನ್ನು 'ವಿಶ್ವ ಪ್ರಧಾನ ಗೈಡ್' ಎಂದು ಆಯ್ಕೆ ಮಾಡಲಾಯಿತು. ಈ ಪದವಿಯನ್ನು ಸ್ವೀಕರಿಸುತ್ತಾ "I'll try to do my best, to help everybody at all time" - ನಾನು ಎಲ್ಲರಿಗೂ ಎಲ್ಲಾ ಸಮಯದಲ್ಲೂ ಕೈಲಾದ ಸಹಾಯವನ್ನು ಮಾಡಲು ಪ್ರಯತ್ನಿಸುತ್ತೇನೆ' ಎಂದು ವಚನ ನೀಡಿದರು.

ಮುಂದಿನ ಎರಡು ವರ್ಷಗಳಲ್ಲಿ ಬಿ.ಪಿ. ದಂಪತಿಗಳು ಚಳವಳಿಯನ್ನು ಬೆಳೆಸಲು, ಬಲಪಡಿಸಲು ಅವಿಶ್ರಾಂತವಾಗಿ ಪ್ರವಾಸ ಕೈಗೊಂಡರು.

**1931**ರಲ್ಲಿ ಮಿಸಸ್ ಸ್ಟಾರೊ (Starrow) ಅವರು ನೀಡಿದ Our chalet (ನಮ್ಮ ಕುಟೀರ) ಭವನವನ್ನು ಅಂತರರಾಷ್ಟ್ರೀಯ ಗೈಡ್ ಚಳವಳಿಗೆ ಸಮರ್ಪಿಸಿದರು. ಅದೇವರ್ಷ WAGGGS ನಿಂದ 'ಕೌನ್ಸಿಲ್ ಫೈರ್' ಎಂಬ ಮಾಸಿಕ ಪ್ರಕಟಣೆಯನ್ನು ಹೊರಡಿಸಿದರು.

**1932**ರಲ್ಲಿ ಅಲೇವ್‌ಅವರ ತಾಯಿಯವರು ನಿಧನರಾದರು. ಬ್ರಿಟಿಷ್ ಸಾರ್ವಭೌಮ ಅವರಿಗೆ ಉನ್ನತ ಪುರಸ್ಕಾರವಾದ 'ಗ್ರೌಂಡ್ಸ್ ಕ್ರಾಸ್ 'ಅನ್ನು ಪ್ರಧಾನ ಮಾಡಿದರು. 1935ರಲ್ಲಿ ಅಲೇವ್ ಅವರು Travelauge (ಪ್ರವಾಸಕಥನ) ಮತ್ತು Guide link (ಗೈಡ್ ಬಂಧಕ) ಎಂಬ ಎರಡು ಪುಸ್ತಕಗಳನ್ನು ಬರೆದು ಪ್ರಕಟಿಸಿದರು.

**1935**ರಲ್ಲಿ ಬಿ.ಪಿ. ದಂಪತಿಗಳು ಚಳವಳಿಯ ಸಂಘಟನೆಯ ದೃಷ್ಟಿಯಿಂದ ಮತ್ತೊಮ್ಮೆ ಭಾರತಕ್ಕೆ ಭೇಟಿ ನೀಡಿದರು.

**1942**ರಲ್ಲಿ ಲೇಡಿ ಬಿ.ಪಿ. ಆಸ್ಟ್ರೇಲಿಯಾಗೆ ಭೇಟಿ ನೀಡಿದರು. ಅವರಿಗೆ ವಂದನೆ ಸಲ್ಲಿಸಲು ಅತಿದೊಡ್ಡ ಐಸ್‌ಕ್ರೀಮ್ ನೀಡಿದರಲ್ಲದೆ ದೇಣಿಗೆ ಸಂಗ್ರಹಿಸಿ ಹಣವನ್ನು ನೀಡಿದರು. ಈ ಹಣವನ್ನು ತಾನು ಉದ್ಘಾಟಿಸುತ್ತಿದ್ದ ಪ್ರಧಾನ ಗೈಡ್ ಕಛೇರಿಗಳಿಗೆ ನೀಡುತ್ತಿದ್ದರು.



1916ರಲ್ಲಿ ಸಸ್ಸೆಕ್ಸ ಜಿಲ್ಲೆಯ ಆಯುಕ್ತೆಯಾದಾಗ



ಸ್ಕೌಟ್ ಜಾಂಬೂರಿಯಲ್ಲಿ ಬಿ.ಪಿ. ದಂಪತಿಗಳು



ವಿಶ್ವ ಸ್ಕೌಟ್ ಜಾಂಬೂರಿಯ ಸಂದರ್ಭದಲ್ಲಿ



ವಿಶ್ವ ಜಾಂಬೂರಿಯಲ್ಲಿ



ವಿಶ್ವ ಜಾಂಬೂರಿಯಲ್ಲಿ



ಜಾಂಬೂರಿಯಲ್ಲಿ ಬಿ.ಪಿ. ದಂಪತಿಗಳು



ಆನಂದದಿಂದ ಕಾರ್ಯಕ್ರಮವನ್ನು ವೀಕ್ಷಿಸುತ್ತಿರುವುದು



ಜಾಂಬೂರಿಯಲ್ಲಿ

# ಸ್ಮೃತಿ : 8

## ಬೇಡನ್ ಪಾವೆಲ್ಲರ ಅಂತಿಮ ದಿನಗಳು

ಲಾರ್ಡ್ ಬಿ.ಪಿ.ಯವರು ಸಂಸ್ಥಾಪಿಸಿದ ಸ್ಕೌಟ್ ವಳವಳಿಯ ಸಂವರ್ಧನೆಗಾಗಿ ಅವಿಶ್ರಾಂತವಾಗಿ ಪತ್ನಿಯ ಜೊತೆ ವ್ಯಾಪಕವಾಗಿ ಸಂಚರಿಸುತ್ತಾ ಹಗಲೂ ಇರುಳು ದುಡಿಯುತ್ತಾ 80 ವರ್ಷವನ್ನು ತಲುಪಿದರು. ಅವರಲ್ಲಿ ಅನಾರೋಗ್ಯ ಕಾಣಿಸಿಕೊಂಡಿತು. ಆಗ ವೈದ್ಯರು ಬಿ.ಪಿ.ಯವರಿಗೆ ಇನ್ನು ತಾವು ನಿವೃತ್ತರಾಗಬೇಕು ಎಂದು ತಿಳಿಸಿದರು. ವೈದ್ಯರ ಸಲಹೆ ಮೇರೆಗೆ ನಿವೃತ್ತ ಜೀವನ ನಡೆಸಲು ದಕ್ಷಿಣ ಆಫ್ರಿಕಾದ ಕೆನ್ಯಾದಲ್ಲಿ 'ಪಾಕ್ಸ್‌ಟು' ಎಂಬ ನೂತನ ಗೃಹವನ್ನು ನಿರ್ಮಿಸಿ ದಂಪತಿಗಳು ಕುಟುಂಬ ಸಮೇತ ಕೆನ್ಯಾಗೆ ಹೊರಟರು. ಕೆನ್ಯಾ ಪರ್ವತ ಶ್ರೇಣಿಗಳಿಂದ ಸುತ್ತುವರಿದಿತ್ತು. ಮನಮೋಹಕವಾದ ಪ್ರಕೃತಿಯ ಮಡಿಲಿನಲ್ಲಿ ಪ್ರಶಾಂತವಾದ ವಾತಾವರಣ ಅಲ್ಲಿತ್ತು.

ಅಲೇವ್ ಬಿ.ಪಿ.ಯವರ ಶುಶ್ರೂಷೆ ಮಾಡುತ್ತಾ, ಮನೆಯ ಉಸ್ತುವಾರಿ ನೋಡುತ್ತಾ, ತೋಟದ ಕೆಲಸ ಮಾಡುತ್ತಾ, ಟೆನ್ನಿಸ್ ಆಡುತ್ತಾ, ಸ್ಕೌಟ್-ಗೈಡ್ ಮೇಲ್ವಿಚಾರಣೆ ಮಾಡುತ್ತಾ ಕಾಲಕಳೆಯುತ್ತಿದ್ದರು. ಅಲ್ಲಿಯೇ ಇರಬೇಕೆಂದಾದ ಮೇಲೆ ಸ್ಥಳೀಯ ಜನರೊಡನೆ ಬೆರೆಯಲು ಅವರ ಭಾಷೆ ಕಲಿಯುವುದು ಸ್ನೇಹಧರ್ಮವೆಂದು ಭಾವಿಸಿ, ಕ್ಲಿಷ್ಟವಾದ ಸ್ಥಳೀಯ ಸ್ವಹಿಲಿ (Swahili) ಭಾಷೆಯನ್ನು ಕಲಿತರು, ಎಂತಹ ವಿಶಾಲದೃಷ್ಟಿ! ಬಿ.ಪಿ,ಯವರು ಪಕ್ಷಿಗಳ ಚಿಲಿಪಿಲಿ ನಾದವನ್ನು ಆಲಿಸುತ್ತಾ ಬೆಟ್ಟದ ಸಾಲಿನ ಮನೋಜ್ಞ ನೋಟವನ್ನು ಆಸ್ವಾದಿಸುತ್ತಾ, ಪ್ರಕೃತಿ ಸೌಂದರ್ಯವನ್ನು ಆನಂದದಿಂದ ಸವಿಯುತ್ತಾ, ಅಲೇವ್ ಅವರು ಬೆಳೆಸಿದ ಹೂದೋಟವನ್ನು ನೋಡುತ್ತಾ ಕಾಲಕಳೆಯುತ್ತಿದ್ದರು. ಇದರ ಜೊತೆಗೆ ಚಿತ್ರ ಬಿಡಿಸುತ್ತಾ ಬಣ್ಣ ತುಂಬುತ್ತಾ ಆನಂದಿಸುತ್ತಿದ್ದರು. ಅವರು "Birds and Best of Africa" ಮತ್ತು "Sketches of Kenya" ಎಂಬ ಎರಡು ಚಿತ್ರಪುಸ್ತಕಗಳನ್ನು ರಚಿಸಿದರು. ಇವೆಲ್ಲದರ ಜೊತೆಗೆ ದಂಪತಿಗಳಿಬ್ಬರೂ ಕುಳಿತು ಪ್ರತಿದಿನ ಬರುವ ಪತ್ರಗಳಿಗೆ ಉತ್ತರಿಸುತ್ತಾ ಸ್ಕೌಟ್-ಗೈಡ್ ಚಳವಳಿಯ ಬಗ್ಗೆ ಚಿಂತಿಸುತ್ತಾ, ಚರ್ಚಿಸುತ್ತಾ ಚಳವಳಿಯ ಮೇಲ್ವಿಚಾರಣೆ ನಡೆಸುತ್ತಿದ್ದರು.

ಬಿ.ಪಿ.ಯವರು ವಿಶ್ರಾಂತಿ ಪಡೆಯುತ್ತಿದ್ದ ದಿನಗಳಲ್ಲೂ 1937 ಜನವರಿಯಿಂದ ಏಪ್ರಿಲ್‌ವರೆಗೆ ಪುನಃ ಭಾರತಕ್ಕೆ ಬಂದು, ಇಲ್ಲಿ ನಡೆದ ರಾಷ್ಟ್ರೀಯ ಜಾಂಬೂರಿಯಲ್ಲಿ ಭಾಗವಹಿಸಿದರು.

ಕೊನೆಯ ದಿನಗಳಲ್ಲಿ ಬಿ.ಪಿ.ಯವರು ಅಸ್ವಸ್ಥರಾಗಿದ್ದರೂ ತಮ್ಮ ಸುತ್ತಲಿನ ಆಗುಹೋಗುಗಳಲ್ಲಿ ಆಸಕ್ತಿಯನ್ನು ಕಳೆದುಕೊಂಡಿರಲಿಲ್ಲ. ರೇಡಿಯೋ ಕೇಳುತ್ತಿದ್ದರು. "The Scouter" ಮಾಸಿಕಕ್ಕೆ ಉಕ್ತಲೇಖನ ನೀಡಿ ಲೇಖನಗಳನ್ನು ಬರೆಸುತ್ತಿದ್ದರು. ಕ್ರಿಸ್‌ಮಸ್ ಶುಭಪತ್ರ ತಯಾರಿಸುತ್ತಿದ್ದರು. ಅವರ ಧ್ವನಿಯು ಕುಗ್ಗಿರಲಿಲ್ಲ. ಆದರೂ ಅವರ ಅಂತಿಮದಿನ ದೂರವಿಲ್ಲವೆನ್ನಿಸುತ್ತಿತ್ತು. 'ನನ್ನ ಮಗಳು ಬೆಟ್ಟಿಯ ಸಹಾಯವಿಲ್ಲದಿದ್ದರೆ ಅವರನ್ನು ನೋಡಿಕೊಳ್ಳುವುದು ಕಷ್ಟವಾಗುತ್ತಿತ್ತು' ಎಂದು ಅಲೇವ್ ತಮ್ಮ ಸ್ವಕಥನದಲ್ಲಿ ತಿಳಿಸಿದ್ದಾರೆ.

ಕ್ರಮೇಣ ಅವರು ನಿತ್ರಾಣವಾಗಿ ಮಲಗಿಯೆ ಇರಬೇಕಾದ ಸ್ಥಿತಿ, ಚಿಂತಾಜನಕವಾಗಿತ್ತು. ಉಸಿರಿಗಾಗಿ ಹೋರಾಟ ನಡೆಸುತ್ತಿದ್ದರು. ಮತ್ತೆ ಚೇತರಿಕೆ ಕಂಡುಬಂದಿತು. ಪುನಃ ಮುಗಳ್ನಗಲಾರಂಭಿಸಿದರು. ಮತ್ತೆ ಖಿನ್ನತೆ ಅವರನ್ನು ಆವರಿಸಿತು. ಅಲೇವ್ ಅವರು 'ನನಗೆ ಖಿನ್ನತೆಯನ್ನು ಸಹಿಸಲಾಗುತ್ತಿಲ್ಲ. ನನಗೆ ರಾಬಿನ್ (ಅಲೇವ್ ಅವರು ಬಿ.ಪಿ.ಯವರನ್ನು ಸಂಬೋಧಿಸುತ್ತಿದ್ದ ಹೆಸರು) ಬದುಕಿರಬೇಕು, ಆದರೆ ಈ ರೀತಿ ಅಸಹಾಯಕತೆಯಿಂದಲ್ಲ' ಎಂದು ದುಃಖಿಸುತ್ತಿದ್ದರಂತೆ.

ಅವರನ್ನು ನೋಡಿಕೊಳ್ಳುತ್ತಿದ್ದ ಸಿಸ್ಟರ್ ರೇ 1941ರ ಜನವರಿ 8ರಂದು ರಾತ್ರಿ 2.30 ಕ್ಕೆ ನನ್ನನ್ನು ಎಚ್ಚರಿಸಿ 'ಅವರು ಹೋಗುತ್ತಿದ್ದಾರೆ' ಎಂದರು. ಅವರ ಬಳಿ ಧಾವಿಸಿ ಹೋಗಿ ಸ್ವಲ್ಪಕಾಲ ಕುಳಿತೆ. ಕೊರೆಯುವ ಚಳಿ, ತೀವ್ರ ಆತಂಕ, ಬಳಲಿಕೆ ಕುಳಿತುಕೊಳ್ಳಲೂ ಸಾಧ್ಯವಾಗದೆ ಪುನಃ ವಿಶ್ರಮಿಸಲು ಹೋದೆ'. 5.45 ಘಂಟೆಗೆ ಮತ್ತೆ ಸಿಸ್ಟರ್ ರೇ ಕೂಗು ಕೇಳಿಸಿತು 'ಅವರು ಹೊರಟೇ ಹೋದರು'. ಆಗ ಅವರು ವಯಸ್ಸು 82. ಅಂದಿಗೆ ನಮ್ಮ 29 ವರ್ಷದ ಸುಮಧುರ ದಾಂಪತ್ಯ ಜೀವನ ಕೊನೆಗೊಂಡಿತು. ಲೋಕ ಸೇವೆಗಾಗಿ ಬೆಳಗುತ್ತಿದ್ದ ಉಜ್ವಲ ದೀಪ

ಒಂದು ನಂದಿಹೋಯಿತು. ಸಾವಿನಲ್ಲೂ ಅವರ ಮುಖದ ಮೇಲೆ ಪ್ರಶಾಂತತೆ ಮತ್ತು ಸಾತ್ವಿಕತೆ ಎದ್ದು ಕಾಣಿಸುತ್ತಿತ್ತು.' ಎಂದು ಅಲೇವ್ ತಮ್ಮ ಕಥನದಲ್ಲಿ ಹೇಳಿದ್ದಾರೆ.

'ಯಾರಾದರೂ ಶಿಸ್ತಿನ ಜೀವನ ನಡೆಸಿದ್ದರೆ ಮತ್ತು ಸದಾ ಒಳಿತಾದ ಉತ್ತಮವಾದುದನ್ನು ಕೊಟ್ಟಿದ್ದರೆ ಅದು 'ನಮ್ಮ ಸಂಸ್ಥಾಪಕರು' ವಿಶ್ವದ ಎಲ್ಲಾ ಸ್ಕೌಟ್ ಗೈಡ್‌ಗಳಿಗೆ ಸ್ಫೂರ್ತಿಯ ಸೆಲೆಯನ್ನು ನೀಡಿದರು' ಎಂದು ಅಲೇವ್ ಅವರು ಬರೆದಿದ್ದಾರೆ.

'ನನಗೆ ಅವರ ಬದುಕಿನ ನೆನಪು ಸದಾ ಹಸಿರಾಗಿರಬೇಕಿತ್ತು. ಹಾಗಾಗಿ ನಾನು ಅವರ ಅಂತಿಮ ಸಮಾಧಿ ಸ್ಥಳಕ್ಕೆ ವಿಧಿಗೆ ಹೋಗಲಿಲ್ಲ. ಅಂತಿಮಕ್ರಿಯೆ ಸಮೀಪದ ನಯೇರಿಯದಲ್ಲಿ ಮಿಲಿಟರಿ ಗೌರವಗಳೊಂದಿಗೆ ನಡೆಸಲಾಯಿತು. ಮಾರನೆಯದಿನ ನಾನೇ ಬಲವಂತವಾಗಿ ಸಮಾಧಿಗೆ ಹೋದೆ. ಸಮಾಧಿಯು ಅವರ ಪ್ರಿಯವಾದ ಕೆನ್ಯಾ ಪರ್ವತ ಶ್ರೇಣಿಯನ್ನು ನೋಡುತ್ತಿತ್ತು. ಸಮಾಧಿಯು ಹೂವುಗಳಿಂದ ತುಂಬಿತ್ತು. ಪ್ರತಿ ಹೂವಿನಲ್ಲಿ ಅವರ ಮುಖವನ್ನು ಕಾಣುತ್ತಾ ಮನಸ್ಸು ಸ್ಥಿಮಿತಕ್ಕೆ ಬರುವವರೆಗೂ ಅತ್ತು ಮನೆಗೆ ಬಂದೆ. ನಂತರ ನಾನು 25 ಮೈಲಿ ದೂರದಲ್ಲಿರುವ ನನ್ನ ಸ್ನೇಹಿತೆಯ ಮನೆಗೆ ಹೋದೆ. ಅಳುತ್ತಾ ಅಳುತ್ತಾ ಅವರ ನೆನಪಿನಲ್ಲಿ ನಡೆದಾಡುತ್ತಾ ದಿನಗಳನ್ನು ಕಳೆದೆ. ಪುನಃ ಮರಳಿ ಮನೆಗೆ ಬಂದೆ. ಅನೇಕಬಾರಿ 'ಅವರು ನನ್ನ ಬಳಿಯೇ ಇದ್ದಾರೆ' ಎಂದು ಭಾಸವಾಗುತ್ತಿತ್ತು. ಕಣ್ಣಲ್ಲಿ ನೀರು ಸುರಿಯುತ್ತಿದ್ದರೂ ಮನಸ್ಸಿನಲ್ಲಿ ಮತ್ತೇನೋ ಸಂಕಲ್ಪ ಮೂಡಿ ಮನಸ್ಸಿಗೆ ಒಂದು ಬಗೆಯ ಶಾಂತಿ ದೊರೆಯಲಾರಂಭಿಸಿತು.'

'ನನಗಾಗ 51 ವರ್ಷ. ನನ್ನ ಪ್ರಿಯತಮ ರಾಬಿನ್ನನು ಬಿಟ್ಟಿರಲಾಗದಿದ್ದರೂ ನಾನು ಸಾಯುವ ಚಿಂತನೆ ಮಾಡಲಿಲ್ಲ. ಮರಳಿ ಬಂದಾಗ ರಾಜರಾಣಿಯರದು ಸೇರಿದಂತೆ ರಾಶಿ ರಾಶಿ ಸಾಂತ್ವನ ಪತ್ರಗಳು ನನಗಾಗಿ ಕಾದಿದ್ದವು. ಅವುಗಳಿಗೆ ಉತ್ತರಿಸತೊಡಗಿದೆ. ಅವರ ನೆನಪಿನಲ್ಲೇ ಅವರ ಸಾಮಾನುಗಳನ್ನು ನೋಡಲಾರಂಭಿಸಿದೆ. ನನಗೆ ಅವರು ಬಿಟ್ಟು ಹೋದ ನಾಲ್ಕು ಪತ್ರಗಳು ಸಿಕ್ಕಿದ್ದವು.

**ಮೊದಲ ಪತ್ರ** 1936 ಜನವರಿ 21

ಪ್ರೀತಿಯ ಡಿಂಡೋ (ಬಿ.ಪಿ.ಯವರು ಪ್ರೀತಿಯಿಂದ ಅಲೇವ್‌ರವರನ್ನು ಸಂಬೋಧಿಸುತ್ತಿದ್ದ ಹೆಸರು)

ನನಗೆ ಹೀಗೊಂದು ಯೋಚನೆ ಬಂದಿತು. ನಾನು ಮೊದಲು ಸತ್ತರೆ ನಿನಗೆಷ್ಟು ನೋವಾದೀತು. ನಾವು ಎಲ್ಲರಂತೆ ಸಾಮಾನ್ಯ ದಂಪತಿಗಳಲ್ಲ. ಹಾಗಿದ್ದಿದ್ದರೆ ನಿನಗೆ ಅಷ್ಟೊಂದು ನೋವಾಗುತ್ತಿರಲಿಲ್ಲ. ಆದರೆ ನಾವು ಸಾಮಾನ್ಯರಂತೆ ಇರುವುದು ಅಸಾಧ್ಯ. ನಮ್ಮಿಬ್ಬರ ನಡುವೆ ಇರುವ ಈ ಅನನ್ಯ ಪ್ರೇಮ ಮತ್ತು ಸಂತಸಗಳು ಜೀವನದ ಕೊನೆಯವರೆಗೂ ಇರಲಿ. ನಾನೇ ಮೊದಲು ಹೋದರೆ, ನಮ್ಮ ಆನಂದ ಮತ್ತು ಅನ್ಯೋನ್ಯತೆಗಳಿಗೆ ತೆತ್ತ ಬೆಲೆ ಎಂದುಕೊಳ್ಳುತ್ತೇನೆ. ಇದು ನಿನಗೂ ಅನ್ವಯಿಸುತ್ತದೆ. ನೀನು ಹೀಗೆ ಆದಲ್ಲಿ ನನ್ನ ದೃಷ್ಟಿಕೋನದಿಂದಲೇ ನೀನು ನೋಡುವೆಯಾ...

ನಿನ್ನ ರಾಬಿನ್

**ಎರಡನೇಯ ಪತ್ರ:** 1936 ನವೆಂಬರ್ 28

ಡಿಂಡೋ ಒಮ್ಮೆ ನನ್ನ ಸ್ನೇಹಿತನ ಸಾವಿಗೆ ಹೋಗಿ ಬಂದೆ. ನಂತರ ನಾವಿಬ್ಬರೂ ಒಂದುದಿನ ಹೀಗೆ ಅಗಲುತ್ತೇವೆ ಎಂದೆನ್ನಿಸಿತು. ನನ್ನ ಬದುಕನ್ನು ಭೂಮಿಯ ಮೇಲಿನ ಸ್ವರ್ಗವಾಗಿ ಮಾಡಿದ್ದಕ್ಕೆ ನಿನಗೆ ವಂದನೆಗಳು. ಯಾರೂ ಮಾಡಲಾರದ್ದನ್ನು ಪತ್ನಿಯಾಗಿ ನೀನು ನನಗೆ ಮಾಡಿದ್ದೀಯೆ. ಸ್ವಾರ್ಥಕ್ಕಿಂತ ದಯೆ ಮತ್ತು ಪ್ರೀತಿಯನ್ನು ನೀಡಿದ್ದೀಯೆ. ಏನನ್ನಾದರೂ ಪಡೆದಮೇಲೆ ಬದಲಿಗೆ ಏನನ್ನಾದರೂ ಕೊಡಬೇಕಲ್ಲವೆ? ಇಂತಹ ಸಂದರ್ಭ ಒದಗಿಬಂದರೆ ನಿನ್ನಧೀಶಕ್ತಿ, ಜ್ಞಾನ, ಒಳ್ಳೆಯತನ ಮತ್ತು ಮಾನವೀಯ ಅನುಕಂಪಗಳು ಮತ್ತೆ ನಿನ್ನ ಬದುಕಿನಲ್ಲಿ ಬೆಳಕನ್ನು ಮೂಡಿಸುತ್ತವೆ. ದುಃಖದ ಕಾರ್ಮೋಡಗಳು ತೇಲಿ ಹೋಗುತ್ತವೆ. ನೀನು ನನಗೆ ನೇರವಾಗಿ 'ಆಗಲಿ ಪ್ರಿಯತಮ ಚಿಂತಿಸಬೇಡ, ನಾನು ಸರಿಯಾದ ಮಾರ್ಗದಲ್ಲಿ ನಡೆಯುತ್ತೇನೆ" ಎಂದು ಹೇಳಬೇಕೆನ್ನಿಸುತ್ತದೆ.

ನಿನ್ನ ರಾಬಿನ್

**ಮೂರನೆಯ ಪತ್ರ** 1940

ನನ್ನ ಪ್ರೀತಿಯ ಡಿಂಡೋ,

ನನ್ನ ವಯಸ್ಸಿನವರು ಅನಿರೀಕ್ಷಿತವಾಗಿ ಸಾವನ್ನಪ್ಪುತ್ತಿರುವುದನ್ನು ನಾನು ನೋಡುತ್ತಿದ್ದೇನೆ. ನನಗೂ ಹೀಗಾದರೆ, ನಿನಗೆ ವಿದಾಯದ ನುಡಿಗಳನ್ನು ತಿಳಿಸಬೇಕೆನಿಸುತ್ತದೆ. ಈಗಾಗಲೇ 2 ಪತ್ರಗಳನ್ನು ಬರೆದಿದ್ದೇನೆ. ಅವುಗಳನ್ನು ಹರಿಯಬೇಕೆಂದುಕೊಂಡು ಮತ್ತೊಮ್ಮೆ ಓದಿದಾಗ ಅವು ಇಂದಿಗೂ, ನಾಳಿಗೂ ನನ್ನ ಭಾವನೆಗಳಾಗಿ ಮುಂದುವರಿಯುತ್ತವೆ ಎನ್ನಿಸಿತು. ಆದ್ದರಿಂದ ಅವನ್ನು ಅಲ್ಲೇ ಇಟ್ಟುಬಿಟ್ಟೆ.

ಈಗ ಮೂರನೆಯ ಪತ್ರವನ್ನು ಬರೆಯುತ್ತಿದ್ದೇನೆ. ಕಾಲು ಶತಮಾನದ ನಮ್ಮ ದಾಂಪತ್ಯದ ಪ್ರೀತಿ ಮತ್ತು ಸ್ನೇಹಕ್ಕೆ ನೀನು ಅಥವಾ ನಮ್ಮಿಬ್ಬರಲ್ಲಿ ಒಬ್ಬರನ್ನು ಕಳೆದುಕೊಂಡು ಮುಂದೆ ಬೆಲೆ ತೆರಬೇಕಾಗುತ್ತದೆ ಎಂಬುದು ಸತ್ಯ.

ದೇವರಿಗೆ ವಂದನೆಗಳು! ನಿನಗೆ ಗರ್ಲ್‌ಗೈಡ್ ಬಗ್ಗೆ ಮಾಡಲು ಸಾಕಷ್ಟು ಕೆಲಸಗಳಿವೆ. ಹೀಗಾದಲ್ಲಿ ಹೃದಯವನ್ನು ಗಟ್ಟಿ ಮಾಡಿಕೊಂಡು ಕೆಲಸ ಮಾಡು. ಮತ್ತೊಂದು ಲೋಕವಿದ್ದರೆ, ನಾನು ನಿನ್ನನ್ನು ಅಲ್ಲಿಂದ ನೋಡುತ್ತಿರುತ್ತೇನೆ.

ಕೊನೆಯ ಪತ್ರವನ್ನು ಅವರ ನಿಧನದ ಕೆಲವೇ ತಿಂಗಳ ಹಿಂದೆ 1940ರಲ್ಲಿ ಬರೆದದ್ದು.

ಪ್ರಿಯ ಡಿಂಡೋ, ನನ್ನ ಈ ನಿತ್ರಾಣ, ನನ್ನ ಕೊನೆಯ ದಿನಗಳ ಆರಂಭವಿರಬೇಕು.

ನನ್ನ ಬದುಕು ಅತ್ಯಂತ ಸಂತಸವಾಗಿತ್ತು. ಈ 27 ವರ್ಷಗಳಲ್ಲಿ ನಮ್ಮ ಬದುಕನ್ನು ನೀನು ಸ್ವರ್ಗವಾಗಿ ಮಾಡಿದ್ದೆಯಲ್ಲದೆ ಗೆಲುವಿನ ಶಿಖರಕ್ಕೇರಿಸಿದೆ. ಅದರಲ್ಲಿ ಗಂಡು ಮಕ್ಕಳ ಮತ್ತು ಹೆಣ್ಣು ಮಕ್ಕಳ ಚಳವಳಿ ನಮ್ಮ ನಿರೀಕ್ಷೆಗೂ ಮೀರಿ ಯಶಸ್ವಿಯಾಗಿದೆ.

ಈ ವಿಶ್ವವೂ ನನಗೆ ಒಳ್ಳೆಯದನ್ನೇ ನೀಡಿದೆ. ನನಗೆ ಇದನ್ನು ಬಿಟ್ಟುಹೋಗಲು ಮನಸ್ಸಿಲ್ಲ. ಆದರೆ, ನಾನು ಪ್ರಪಂಚವನ್ನು ಬಿಡುವ ಹಂತವನ್ನು

ತಲುಪ್ಪಿದ್ದೇನೆ. ನನಗೆ, ಎಲ್ಲಕ್ಕೂ ಮಿಗಿಲಾದವಳು ನೀನು. ನೀನು ನನ್ನ ಪ್ರಿಯತಮೆ, ನಿನ್ನನ್ನು ಬಿಟ್ಟು ಹೋಗಬೇಕೆಂಬ ಸತ್ಯ ನನ್ನನ್ನು ಬಾಧಿಸುತ್ತಿದೆ. ಇದು ನಿನ್ನ ಬದುಕಿನಲ್ಲಿ ಭಾರಿ ಆಘಾತವನ್ನುಂಟುಮಾಡುತ್ತದೆ. ನೀನು ತಿಳುವಳಿಕೆಯುಳ್ಳವಳು. ಈ ಸಹಜ ಸತ್ಯವನ್ನು ಸರಿಯಾದ ರೀತಿಯಲ್ಲಿ ಸ್ವೀಕರಿಸುತ್ತೀಯ ಎಂದು ನಂಬಿದ್ದೇನೆ. ನನಗೆ ಈ ಯೋಚನೆ ಬಂದಾಗ ಸಮಾಧಾನವಾಗುತ್ತದೆ. ನಿನಗೆ ಮಾಡಲು ಕೈತುಂಬ ಕೆಲಸವಿದೆ. ನಿನಗೆ ಸಮಾಧಾನ ನೀಡಲು ಮಕ್ಕಳು ಮತ್ತು ಅವರ ಮಕ್ಕಳು ಇದ್ದಾರೆ. ನಾನು ಹೋದ ತಕ್ಷಣ ಈ ಆಘಾತ ಮತ್ತು ಒಂಟಿತನಕ್ಕೆ ಹೊಂದಿಕೊಳ್ಳಲು ಬೆಟ್ಟಿಯ ಬಳಿ ಹೋಗುತ್ತೀಯ ಎಂದು ನಂಬುತ್ತೇನೆ. ನಿನ್ನ ದುಃಖ ನೆನೆದಾಗ ನನಗೆ ಪಶ್ಚಾತ್ತಾಪ ಉಂಟಾಗುತ್ತದೆ. ನೀನು ಹೆಚ್ಚು ದುಃಖಿಸುವುದಿಲ್ಲ ಎಂದು ತಿಳಿದರೆ, ನಾನು ಸಂತಸದಿಂದ ಸಾಯುತ್ತೇನೆ.

ನಿನ್ನ ಬಿನ್

ಅಲೇವ್ ಅವರಿಗೆ ಪತಿಯವರ ಪತ್ರಗಳನ್ನು ಓದಿದನಂತರ ಪತಿಯ ನಿರೀಕ್ಷೆ ಮತ್ತು ನನ್ನ ಮುಂದಿರುವ ಕರ್ತವ್ಯ ಸ್ಪಷ್ಟವಾಯಿತು. ಅವರು ಸ್ಥಾಪಿಸಿದ ಚಳವಳವಳಿಯನ್ನು ಮುಂದುವರೆಸಬೇಕೆಂದು ಅಲೇವ್ ಅವರು ಸಂಕಲ್ಪ ಮಾಡಿದರು. 1942ರಲ್ಲಿ ಇಂಗ್ಲೆಂಡಿಗೆ ಬಂದರು. ಬರುವ ಮುನ್ನ ಪತಿಯವರ ಸಮಾಧಿಯನ್ನು ಕಟ್ಟಿಸಿದರು. ಸ್ಕೌಟಿಂಗ್-ಗೈಡಿಂಗ್ ವಿಶ್ವಚಿಹ್ನೆಯನ್ನು ಮತ್ತು ಅವರೇ ರಚಿಸಿದ ಮಾರ್ಗ ಸಂಕೇತ-'ಮನೆಗೆ ಹೋಗಿದ್ದೇನೆ' ಎಂಬುದನ್ನು ಸಮಾಧಿ ಕಲ್ಲಿನ ಮೇಲೆ ಕೆತ್ತಿಸಿದರು. ಸುತ್ತಲೂ ಚಿಕ್ಕ ಹೂತೋಟವನ್ನು ವ್ಯವಸ್ಥೆ ಮಾಡಿದರು

ಅಲೇವ್ ಅವರ ಪತಿಯ ಬಗ್ಗೆ ಈ ರೀತಿ ಬರೆದಿದ್ದಾರೆ-'ಯಾರಾದರೂ ಶಿಸ್ತಿನ ಜೀವನವನ್ನು ನಡೆಸಿದ್ದರೆ, ಒಂದೇ ಒಂದು ಆದರ್ಶಕ್ಕಾಗಿ

ತನ್ನಲ್ಲಿರುವುದನ್ನೆಲ್ಲಾ ಕೊಟ್ಟಿದ್ದರೆ ಅದು ನಮ್ಮ ಚಳಚಳಿಯ ಸಂಸ್ಥಾಪಕರು (ಬಿ.ಪಿ.) ವಿಶ್ವದ ಎಲ್ಲಾ ಸ್ಕೌಟ್–ಗೈಡ್‌ಗಳಿಗೆ ಚಿರನೂತನವಾದ ಸ್ಫೂರ್ತಿಯನ್ನು ನೀಡಿದ್ದಾರೆ.' ಅಲೇವ್ ಅವರು ಬಿ.ಪಿ.ಯವರ ಬಗ್ಗೆ ಹೀಗೆ ಬರೆದಿದ್ದಾರೆ, 'ಅವರು ಪರಿಪೂರ್ಣರು, ಅವರು ಒಳ್ಳೆಯ ವಿನಯವಂತರು, ಅವರು ಜಾಣರು ಮತ್ತು ಶ್ರೇಷ್ಠರು, ಕಲಾಕಾರ ಮತ್ತು ಕ್ರೀಡಾಸ್ಫೂರ್ತಿಯುಳ್ಳವರು, ಸರಳ ವ್ಯಕ್ತಿ, ಯಾವ ನಕಾರಾತ್ಮಕಗಳಿಂದಲೂ ಪ್ರಭಾವಿತರಾಗದೇ ಇರುವವರು, ಅವರೊಬ್ಬ 'ಅಸಾಧಾರಣ' ವ್ಯಕ್ತಿ. ಅವರು ಭಾವಪೂರ್ಣ, ಹಾಸ್ಯಭರಿತ ಮತ್ತು ವರ್ಣಮಯ ಪತ್ರಗಳನ್ನು ಮತ್ತು ಪ್ರೇಮ ಪತ್ರಗಳನ್ನು ಬರೆಯುತ್ತಿದ್ದರು."



ಕೊನೆಯ ದಿನಗಳಲ್ಲಿ
ಬಿ.ಪಿ




ಕೆನ್ಯದಲ್ಲಿ
ಬಿ.ಪಿ.ಯವರ
ಸಮಾಧಿ

# ಸ್ಮೃತಿ: 9

## ಬಿ.ಪಿ.ಯವರ ನಂತರ ಅಲೇವ್

ಬಿ.ಪಿ.ಯವರ ನಂತರ ಅಲೇವ್ ಅವರು ಚಳವಳಿಯನ್ನು ಬಲವರ್ಧಿಸಿ, ಸದಸ್ಯರನ್ನು ಬೆಳೆಸಲು ಕಟಿಬದ್ಧರಾಗಿ, ಅವರಿಲ್ಲದ ಅಸಹನೀಯ ಕೊರತೆಯನ್ನು ಅನುಭವಿಸುತ್ತಾ ಅದರ ಉಪಶಮನಕ್ಕಾಗಿ ಕಾರ್ಯನಿರತರಾದರು. ಗೈಡಿಂಗ್‌ನ ಜೊತೆಗೆ ಸ್ಕೌಟಿಂಗ್ ಬಗ್ಗೆಯೂ ಕಾಳಜಿ ವಹಿಸಿದರು. ವಿಶ್ವ ಗೈಡ್ ಸಂಸ್ಥೆಯಲ್ಲಿ ಆಡಳಿತ ವ್ಯವಸ್ಥೆಗಾಗಿ ಅಂತರರಾಷ್ಟ್ರೀಯ ಸಮ್ಮೇಳನ ವಿಶ್ವಸ್ಥ ಮಂಡಳಿ, ವಿಶ್ವಕಾರ್ಯಾಲಯಗಳನ್ನು ಚುರುಕುಗೊಳಿಸಿದರು. ಇವುಗಳ ಕಾರ್ಯಗಳನ್ನು ಕುರಿತು ನೀತಿ ನಿಯಮಗಳನ್ನು ರೂಪಿಸಿದರು. ಇದರಿಂದ ಅಂತರರಾಷ್ಟ್ರೀಯ ಮಟ್ಟದಲ್ಲಿ ಪರಸ್ಪರ ಸದಸ್ಯ ರಾಷ್ಟ್ರಗಳು ವ್ಯವಹರಿಸಲು, ಸಕ್ರಮವಾಗಿ ಸಂಘಟನೆಯನ್ನು ಮುಂದುವರೆಸಲು ಅನುಕೂಲವಾಯಿತು. ಹೊಸ ಸದಸ್ಯ ರಾಷ್ಟ್ರಗಳನ್ನು ನೋಂದಾಯಿಸುವ ಕಾರ್ಯವನ್ನು ಕೈಗೊಂಡರು.

ಈ ಮಧ್ಯೆ ಆಗ್ನೆಸ್ ಬಿ.ಪಿ.ಯವರು ಅಸ್ವಸ್ಥರಾದರು. ಅಲೇವ್ ಅವರನ್ನು ನೋಡಿ ಬಂದರು. ಅಗ್ನೇಸ್ ಅವರು 1945ರಲ್ಲಿ ದೈವಾಧೀನರಾದರು.




1958ರಲ್ಲಿ ಮೆಕ್ಸಿಕೊ ದೇಶದಲ್ಲಿ 'ಜೂಲಿಯಟ್ ಲೋ' ನಿಧಿಯ ಸಹಾಯದಿಂದ ಕಟ್ಟಿದ "Our Cabana" ವನ್ನು ಅಲೇವ್ ಬಿ.ಪಿ.ಯವರು ಗೈಡಿಂಗ್‌ಗೆ 22 ಫೆಬ್ರವರಿಯಂದು ಸಮರ್ಪಣೆ ಮಾಡಿದರು.

1963ರಲ್ಲಿ ಅಲೇವ್ ಬಿ.ಪಿ.ಯವರು ತಮ್ಮ ಕಾರ್ಯಕ್ರಮಗಳನ್ನು ಕಡಿಮೆ ಮಾಡಿದರು. ಪ್ರತಿ ಜನವರಿ 8ರಂದು ತಪ್ಪದೆ ಬಿ.ಪಿ.ಯವರ ಸಮಾಧಿಗೆ ಭೇಟಿ

ನೀಡುತ್ತಿದ್ದರು. 'ನನಗೆ ಮೊದಲಿನಷ್ಟು ದುಃಖದ ಆವೇಗವಿಲ್ಲ. ಬದಲಿಗೆ ಅನಿರ್ವಚನೀಯ ಶಾಂತಿ ಮೂಡುತ್ತಿದೆ. ಮೌನವಾಗಿ ಅವರ ಜೊತೆ ಸೇರಲು ಪ್ರಾರ್ಥಿಸುತ್ತೇನೆ. ಇನ್ನುಮುಂದೆ ಆ ದಿನಕ್ಕಾಗಿ ಕಾತುರದಿಂದ ಕಾಯುತ್ತೇನೆ' ಎನ್ನುತ್ತಿದ್ದರು.


SANGAM

1963 ಮೇ 15ರಂದು ಬಿ.ಪಿ.ಯವರು 1907ರಲ್ಲಿ 'ಮೊದಲ ಸ್ಕೌಟ್ ಪ್ರಾಯೋಗಿಕ ಶಿಬಿರ' ನಡೆಸಿದ 'ಬ್ರೌನ್ಸಿ ದ್ವೀಪವನ್ನು ರಾಷ್ಟ್ರೀಯ ದತ್ತಿ ಆಸ್ತಿಯಾನ್ನಾಗಿ ಸ್ವೀಕರಿಸಲು ಏರ್ಪಡಿಸಿದ ಸಮಾರಂಭದಲ್ಲಿ ಬಿ.ಪಿ.ಯವರ ಕಾರ್ಯವನ್ನು ಹೆಮ್ಮೆಯಿಂದ ನೆನೆಯುತ್ತಾ ಸಮಾರಂಭದಲ್ಲಿ ಭಾಗವಹಿಸಿದೆ. ಈ ದಿನವನ್ನು ನೋಡಲು ಅವರಿಲ್ಲವಲ್ಲ ಎಂದು ನನ್ನ ಮನ ಮಿಡಿಯುತ್ತಿತ್ತು' ಎಂದಿದ್ದಾರೆ.

1966ರಲ್ಲಿ ಭಾರತದ ಪುಣೆಯಲ್ಲಿ ಕಟ್ಟಿದ 4ನೇ ಗೈಡ್‌ಭವನ 'ಸಂಗಮ್' ಅನ್ನು ಶ್ರೀಮತಿ ಅಲೇವ್ ಬೇಡನ್ ಪಾವೆಲ್‌ರು ಅಕ್ಟೋಬರ್ 16ರಂದು ಉದ್ಘಾಟಿಸಿ ಗೈಡಿಂಗ್‌ಗೆ ಸಮರ್ಪಣೆ ಮಾಡಿದರು.

1968ರಲ್ಲಿ ಅಮೇರಿಕಾದ ಬಾಯ್ಸ್ ಸ್ಕೌಟ್‌ಗಳು ಅಲೇವ್ ಅವರಿಗೆ ವ್ಯಾಪಕವಾಗಿ ಪ್ರವಾಸ ಮಾಡಲು 'ಅನಿಯಮಿತ ಕ್ರೆಡಿಟ್ ಕಾರ್ಡ್' ನೀಡಿದರು.

1970ರವರಿಗೆ ಸುಮಾರು 2 ದಶಕಗಳ ಕಾಲ ಕಾರಿನಲ್ಲಿ, ರೈಲಿನಲ್ಲಿ, ಸುಮಾರು 673 ವಿಮಾನಗಳಲ್ಲಿ ವಿಶ್ವದ 111 ರಾಷ್ಟ್ರಗಳಿಗೆ ಭೇಟಿ ನೀಡಿದ್ದಾರೆ. ಸುಮಾರು 50 ಲಕ್ಷ ಮೈಲಿ ಪ್ರಯಾಣಿಸಿದ್ದಾರೆ. ವಿಶ್ವದಾದ್ಯಂತ ಹೆಣ್ಣುಮಕ್ಕಳು ಮನೆಯಲ್ಲೇ ಇರುತ್ತಿದ್ದ ಕಾಲದಲ್ಲಿ, ಹೆಣ್ಣುಮಕ್ಕಳು ಒಂಟಿಯಾಗಿ ಪ್ರಯಾಣ ಮಾಡುವುದು ನಿಷಿದ್ಧವಾಗಿದ್ದ ಕಾಲದಲ್ಲಿ, ಅಲೇವ್ ಅವರು ದಾಖಲೆ ಮಾಡುವಷ್ಟು ಪ್ರಯಾಣವನ್ನು ಒಂಟಿಯಾಗಿ ಮಾಡಿದ್ದರು. ಚಳವಳಿಯ ಪ್ರಸಾರಕ್ಕಾಗಿ ಅವಿಶ್ರಾಂತವಾಗಿ ಪ್ರವಾಸ ಮಾಡಿದರು. ಹೀಗೆ ಪ್ರವಾಸ

ಮಾಡುವಾಗ ಅನೇಕ ರಾಷ್ಟ್ರಗಳ ಜಾಂಬೂರಿಗಳಲ್ಲಿ ಭಾಗವಹಿಸಿದ್ದಾರೆ. ಅನೇಕ ರಾಷ್ಟ್ರಗಳು ಇವರನ್ನು ಗೌರವಿಸಿ ಪುರಸ್ಕಾರಗಳನ್ನು ನೀಡಿವೆ. ವಿವಿಧ ದೇಶಗಳಲ್ಲಿ 100ಕ್ಕೂ ಹೆಚ್ಚು ವೇದಿಕೆ ಉಪನ್ಯಾಸಗಳನ್ನು, ನೂರಾರು ಆಕಾಶವಾಣಿ ಸಂದರ್ಶನಗಳನ್ನು, ದೂರದರ್ಶನ ಸಂದರ್ಶನಗಳನ್ನೂ ನೀಡಿದ್ದಾರೆ. ಎಲ್ಲಾ ಉಪನ್ಯಾಸಗಳಲ್ಲೂ ಸೇವೆ, ಸ್ನೇಹ, ಪ್ರೀತಿ, ವಿಶ್ವಬಂಧುತ್ವ, ವಿಶ್ವಶಾಂತಿ ವಿಶ್ವಕುಟುಂಬದ ಮೌಲ್ಯಗಳನ್ನು ಪ್ರಾಮಾಣಿಕವಾಗಿ ಸಾರಿದ್ದಾರೆ.

'ನಾನು ನಿಮ್ಮವಳು, ನೀವು ನನ್ನವರು, ನಾವೆಲ್ಲಾ ಎಲ್ಲರವರು, ಈ ವಿಶ್ವ ಕುಟುಂಬಕ್ಕೆ (ಸ್ಕೌಟಿಂಗ್–ಗೈಡಿಂಗ್) ಸೇರಿದವರು."

"ಸ್ಕೌಟಿಂಗ್–ಗೈಡಿಂಗ್ ಸ್ನೇಹ ಮತ್ತು ವಿನೋದವನ್ನು ಕೊಟ್ಟುಕೊಳ್ಳುವ ವ್ಯವಹಾರ' ಎನ್ನುತ್ತಿದ್ದರು.

ಅವರು ಯುದ್ಧ ನಡೆಯುತ್ತಿದ್ದ ಸ್ಥಳಗಳಲ್ಲೂ ಅಪಾಯವನ್ನು ಲೆಕ್ಕಿಸದೆ ಅಲ್ಲಿ ಸೇವೆ ಸಲ್ಲಿಸುತ್ತಿದ್ದ ಸ್ಕೌಟ್‌ಗಳನ್ನು ಸಂದರ್ಶಿಸಲು ಭೇಟಿ ನೀಡಿ ಪ್ರೋತ್ಸಾಹಿಸುತ್ತಿದ್ದರು. ಹೀಗೆ ಪ್ರಯಾಣ ಮಾಡುವಾಗ ಅಂದಿನ ವರದಿ, ದಿನಚರಿ, ಪತ್ರ ವ್ಯವಹಾರಗಳನ್ನು ಪುಟ್ಟ ಟೈಪ್‌ರೈಟರ್‌ನಲ್ಲಿ ಸಿದ್ಧಮಾಡಿ ಕೊಳ್ಳುತ್ತಿದ್ದರು. ಅವರು ಮುಂದಿನ ನಿಲ್ದಾಣದಲ್ಲಿ ಇಳಿಯುವ ಮುನ್ನ ಅಂಚೆಪೆಟ್ಟಿಗೆಗೆ ಹಾಕಲು ಲಕೋಟೆಗಳು ಸಿದ್ಧವಿರುತ್ತಿದ್ದವು. ಇವರು ಬಹು ದಕ್ಷತೆಯಿಂದ ವ್ಯವಹಾರ ಮಾಡುತ್ತಿದ್ದ ಅಪರೂಪದ ನಾಯಕಿಯಾಗಿದ್ದರು. ಅಂದಿನ ಕೆಲಸ ಅಂದೇ ಮಾಡು ಎಂಬ ನುಡಿಯ ಆದರ್ಶಕ್ಕೆ ಪ್ರಾತ್ಯಕ್ಷಿಕೆಯಾಗಿದ್ದರು.

ಅವರ ಬಗ್ಗೆ ವಿಶ್ವಪ್ರಸಿದ್ಧ ಮಾಸಿಕ ರೀಡರ್ಸ್ ಡೈಜಸ್ಟ್‌ನ ಜೇನೆಟ್ ಗ್ರಾಹಾಮ್ ಎಂಬ ವರದಿಗಾರ್ತಿ ಹೀಗೆ ಹೇಳಿದ್ದಾರೆ 'ಅಲೇವ್ ಬಿ.ಪಿ.ಯವರು ಸಮವಸ್ತ್ರ ಧರಿಸಿ, ಹಗುರವಾದ ಪ್ರಯಾಣ ಸಂಚಿ (Holdall) ಹಿಡಿದು ಒಂದು ಪುಟ್ಟ ಟೈಪ್‌ರೈಟರ್ ಇಟ್ಟುಕೊಂಡು ದೇಶದಿಂದ ದೇಶಕ್ಕೆ ಹಾರುವಾಗಿನ ಸಂತಸವನ್ನು ಅವರಲ್ಲಿ ಮತ್ತಾವಾಗಲೂ ಕಾಣಲು ಸಾಧ್ಯವಿರಲಿಲ್ಲ.' ಮತ್ತೋರ್ವ ವರದಿಗಾರ್ತಿ ಅಲೇವ್ ಅವರನ್ನ ಸಂದರ್ಶಿಸಿದಾಗ ಸ್ಕೌಟ್–ಗೈಡ್ ಚಳವಳಿಯಲ್ಲಿ ತಮ್ಮ ಕೆಲಸವೇನು ಎಂದು ಪ್ರಶ್ನಿಸಿದರು. ಅವರು ಅದಕ್ಕೆ. 'ನನ್ನ ಕೆಲಸವೇ ಈ ಚಳವಳಿಯನ್ನು ವಿಸ್ತರಿಸುವುದು (OOMPH) ನಿಜವಾಗಿಯೂ

ನನ್ನನ್ನು ಇದರ ಪ್ರಧಾನ ವಿಸ್ತಾರಕಿ (Chief Oompher) ಎಂದೇ ಕರೆಯಬೇಕು' ಎಂದು ತಮ್ಮ ಕೆಲಸದ ಬಗ್ಗೆ ವಿಶ್ವಾಸದಿಂದ ಹೇಳಿದರಂತೆ. ಅಲೇವ್ ಅವರ ಬಗ್ಗೆ ಓರ್ವ ಗೈಡ್ ಪತ್ರ ಬರೆಯುತ್ತಾಳೆ 'ಅವರ ಪತ್ರಗಳು ಮಾಣಿಕ್ಯಗಳು! ಅವರಂತೆ ಯಾರೂ ಬರೆಯಲು ಸಾಧ್ಯವಿಲ್ಲ. ಸಾವಿರಾರು ಜನರ ಮಧ್ಯೆ ನಾವು ಅವರನ್ನು ಸಂಧಿಸಿದ್ದರೂ, ಪತ್ರ ಬಂದಾಗ ಅದು ತೀರಾ ನಮ್ಮ ಹೃದಯಕ್ಕೆ ಹತ್ತಿರವಾಗಿರುತ್ತದೆ. ಪತ್ರವು ಜೀವಂತಿಕೆಯಿಂದ ತುಂಬಿರುತ್ತದೆ. ಹಾಗೂ ಸಾಕಷ್ಟು ಆಳವಾದ ವಿಚಾರಗಳನ್ನು ಹೊಂದಿರುತ್ತವೆ."

ನಮ್ಮ ಹೃದಯಕ್ಕೆ ಹತ್ತಿರವಾಗಿರುತ್ತದೆ. ಪತ್ರವು ಜೀವಂತಿಕೆಯಿಂದ ತುಂಬಿರುತ್ತದೆ. ಹಾಗೂ ಸಾಕಷ್ಟು ಆಳವಾದ ವಿಚಾರಗಳನ್ನು ಹೊಂದಿರುತ್ತವೆ.'

ಅವರು ಕೆನಡಾ ಪ್ರವಾಸದಲ್ಲಿರುವಾಗಲೇ ಅವರಿಗೆ ಲಘು ಹೃದಯಾಘಾತವಾಯಿತು. ಆದ್ದರಿಂದ ಅವರು ಮರಳಿ ಬಂದು ವೈದ್ಯರ ಸಲಹೆಯ ಮೇರೆಗೆ ಮನೆಯಲ್ಲೇ ಉಳಿಯಬೇಕಾಯಿತು. '1970ರಲ್ಲಿ ಹ್ಯಾಪ್ಟನ್ ಕೋರ್ಟ್‌ನಲ್ಲಿ ಗೃಹ ಕಛೇರಿ ತೆರೆದೆ. ಬಂಧುಗಳು, ಹಿತೈಷಿಗಳು, ವಿದೇಶಿಯರು, ಸ್ನೇಹಿತರು, ಸ್ಕೌಟ್-ಗೈಡ್ ಬಂಧುಗಳು ಹೀಗೆ ಹಲವು ವಿಧದ ಅತಿಥಿಗಳು, ಸಂದರ್ಶಕರು ಬರುತ್ತಿದ್ದರು. ಅವರೆಲ್ಲರ ಕುಶಲೋಪರಿ ವಿಚಾರಿಸುತ್ತಾ, ಚರ್ಚಿಸುತ್ತಾ, ಸಲಹೆ ನೀಡುತ್ತಾ, ಆತಿಥ್ಯ ನೀಡುತ್ತಿದ್ದೆ. ಸ್ನೇಹವನ್ನು ಬೆಳೆಸುವ ಸಲುವಾಗಿ ಅಪರಿಚಿತರನ್ನು ಒಬ್ಬರಿಗೊಬ್ಬರನ್ನು ಪರಿಚಯ ಮಾಡಿಸುತ್ತಿದ್ದೆ. ಚಳವಳಿಯ ಬಗ್ಗೆ ತಿಳಿಯದವರಿಗೆ ಅವರ ಪರಿಚಯ ಮಾಡಿಸುತ್ತಿದ್ದೆ. ಬಿ.ಪಿ.ಯವರು ತಮ್ಮ ಪ್ರಯಾಣ, ಸಾಧನೆ, ಅನುಭವ, ನೋಟಗಳ ಬಗ್ಗೆ ಬರೆದ ದಿನಚರಿ, ಅದರಲ್ಲಿ ಅಲ್ಲಲ್ಲಿ ಅಳವಡಿಸಿದ ಛಾಯಾ ಚಿತ್ರಗಳನ್ನು ಹೊಂದಿದ್ದ 12 ದಿನಚರಿ ಪುಸ್ತಕ ಸಿದ್ಧಪಡಿಸಿದ್ದರು. ಅದನ್ನೂ ಸಂದರ್ಶಕರಿಗೆ ಕೊಡುತ್ತಿದ್ದೆ. ಗೋಡೆಗಳ ಮೇಲೆ ಅವರ ಜಲವರ್ಣ ಚಿತ್ರಗಳನ್ನು ತೂಗು ಹಾಕಿದ್ದೆ. ಸಜೀವ ಗಾತ್ರದ ಪ್ರತಿಮೆಗಳನ್ನು ಪ್ರದರ್ಶಿಸಿದ್ದೆ. ಅವರ ಕೆಲವು ಸೈನ್ಯದ ಸಾಮಾಗ್ರಿಗಳನ್ನು 'ಸೈನ್ಯ ವಸ್ತು ಸಂಗ್ರಹಾಲಯಕ್ಕೆ ನೀಡಿದ್ದೆ, ಉಳಿದವುಗಳನ್ನು ಇಲ್ಲಿ ಪ್ರದರ್ಶಿಸಿದ್ದೆ' ಎಂದು ತಮ್ಮ ಆತ್ಮಕಥೆಯಲ್ಲಿ ಹೇಳಿದ್ದಾರೆ.

ಅವರೊಡನೆ ತಂಗುವ ಸ್ನೇಹಿತರು, ಅತಿಥಿಗಳಿಗೆ ಬೆಳಗಿನಿಂದ ರಾತ್ರಿ ಬಹಳ ಹೊತ್ತಿನವರೆಗೂ ಕೇಳಿಬರುತ್ತಿದ್ದ Typewriter ನ ಕಟ್ ಕಟ್ ಧ್ವನಿ

ಮರೆಯಾಲಾಗುತ್ತಿರಲಿಲ್ಲ. ಈ ಕಟ್ ಕಟ್ ಧ್ವನಿ ಅವರ ಜೀವನಗಾನದ ತಾಳದಂತೆ ಅವರೊಡನೆ ನಿರಂತರವಾಗಿ ಸಾಗುತ್ತಿತ್ತು.

'ನಾನು ಸಾರ್ವಜನಿಕವಾಗಿ ಕಾಣಿಸಿಕೊಳ್ಳುವುದು ತೀರಾ ಕಡಿಮೆಯಾಯಿತು. ಒಮ್ಮೆ ನಾನು ಮಾರುಕಟ್ಟೆಯಿಂದ ಬರುತ್ತಿದ್ದಾಗ, ಮನೆಯ ಮುಂದೆ ಪುಟ್ಟ ಹುಡುಗ ನಿಂತು ನನ್ನ ನಾಮಫಲಕ ಓದುತ್ತಿದ್ದ. ಅವನ ತಾಯಿ ನಡೆನಡೆ ಅದನ್ನು ಓದಿ ಏನು ಪ್ರಯೋಜನ. ಅವರು ಸತ್ತು ಆಗಲೇ ವರ್ಷಗಳೆ ಆಗಿವೆ' ಎಂದರು. ಇದನ್ನು ಕೇಳಿಸಿಕೊಂಡ ನಾನು, ಸಧ್ಯ ನಾನು ಬದುಕಿದ್ದೇನೆ ಎಂಬುದು ನನ್ನ ಸ್ಕೌಟ್-ಗೈಡ್ ಕುಟುಂಬಕ್ಕೆ ತಿಳಿದಿದೆಯಲ್ಲ ಅಂದುಕೊಂಡು ಸಮಾಧಾನಗೊಂಡೆ' ಎಂದಿದ್ದಾರೆ. 'ನನಗೆ ಬಹಳ ಕಾಲ ಬದುಕಿದ್ದು ಹೊರೆಯಾಗಲು ಇಷ್ಟವಿಲ್ಲ. ಆದರೆ ಗೈಡಿಂಗ್ ಸುವರ್ಣ ಮಹೋತ್ಸವವನ್ನು ಕಾಣಲು, ಅದರಲ್ಲಿ ಭಾಗವಹಿಸಲು ನನಗೆ ದೇವರು ನೀಡಿದ ಅವಕಾಶಕ್ಕಾಗಿ ಸಂತಸವಾಗುತ್ತಿದೆ. 1969ರಲ್ಲಿ ವೆಸ್ಟ್ ಮಿನಿಸ್ಟರ್ಸ್ ಅಬೆಯಲ್ಲಿ ಸುವರ್ಣ ಮಹೋತ್ಸವವನ್ನು ಉದ್ಘಾಟಿಸಿ ಭಾಗವಹಿಸಿದೆ. ಬೇರೆ ಬೇರೆ ಕೆಲವು ರಾಷ್ಟ್ರಗಳಿಗೂ ಭೇಟಿ ನೀಡಿದೆ. ಪ್ರತಿ ಸಭೆಯಲ್ಲೂ ಜನರು ಕಿಕ್ಕಿರಿದು ನೆರೆದಿರುತ್ತಿದ್ದರು. ಸ್ಕೌಟ್-ಗೈಡ್‌ಗಳ ಆನಂದ ಮತ್ತು ವಿಶ್ವಾಸ ತುಂಬಿದ ಮುಖಗಳು ನನಗೆ ಆನಂದವನ್ನು ಉಂಟುಮಾಡುತ್ತಿತ್ತು. ನನ್ನ ರಾಬಿನ್‌ರ (ಬಿ.ಪಿ.) ನೆನಪಾಯಿತು. ಅವರು ರಚಿಸಿದ ಸರಳ ವಿಚಾರವುಳ್ಳ ಈ ಪ್ರತಿಜ್ಞೆ! ಎಷ್ಟೊಂದು ದೂರಕ್ಕೆ ಸಾಗಿದೆ, ಎಷ್ಟೊಂದು ಅದ್ಭುತವಾದ ಪ್ರಭಾವ ಬೀರಿದೆ!' ಎಂದು ಹೆಮ್ಮೆಪಟ್ಟರು. ಅನಾರೋಗ್ಯ ನಿಮಿತ್ತ ದಕ್ಷಿಣ ಆಫ್ರಿಕಾದಿಂದ ಮರಳಿ ಇಂಗ್ಲೆಂಡಿಗೆ ಬಂದರು. 'ಈ ಸುವರ್ಣ ಮಹೋತ್ಸವ ಪ್ರವಾಸವು ನಾನು ವಿಶ್ವಕ್ಕಾಗಿ ನನ್ನ ಕೈಲಾದದ್ದನ್ನು ಮಾಡಿದ್ದೇನೆ ಎಂಬ ಭಾವಾನುಭೂತಿಯನ್ನು ಮೂಡಿಸಿತು. ಸುಮಾರು 60 ವರ್ಷಗಳ ಕಾಲ ನಿರಂತರವಾಗಿ ಚಳವಳಿಯ ಸೇವೆ ಮಾಡಿ ದಣಿದಿದ್ದೆ. ನಾನು 1920ರಿಂದ ಎಲ್ಲಾ ಸ್ಕೌಟ್ ಜಾಂಬೂರಿಗಳಲ್ಲೂ ಭಾಗವಹಿಸಿದ್ದೆ. ಜಪಾನಿನಲ್ಲಿ 1971ರಲ್ಲಿ ನಡೆದ ಜಾಂಬೂರಿಗೆ ವೈದ್ಯರ ನಿರಾಕರಣೆಯಿಂದ ಹೋಗಲಾಗಲಿಲ್ಲ. ಆದರೆ ಅದೇವರ್ಷ ಬಿ.ಪಿ.ಯವರ ಪ್ರತಿಯನ್ನು ಉದ್ಘಾಟಿಸಲು ಅಂತರರಾಷ್ಟ್ರೀಯ ಸ್ಕೌಟ್ ತರಬೇತಿ ಕೇಂದ್ರವಾದ ಗಿಲ್‌ವೆಲ್ ಪಾರ್ಕ್‌ಗೆ ಹೋಗಿದ್ದೆ."

ಅಲೇವ್ ಅವರು ಇಷ್ಟೊಂದು ಕಾರ್ಯ ಒತ್ತಡಗಳ ಮಧ್ಯೆಯೂ 1973ರಲ್ಲಿ ತಮ್ಮ ಆತ್ಮಕಥೆಯನ್ನು ಮೇರಿಡ್ರಿವೆರಿ ಎಂಬುವವರಿಗೆ ಹೇಳಿದರು. ಅವರು ಅದನ್ನು ಹೃದಯಂಗಮವಾಗಿ ಸಂಕಲಿಸಿದರು. ಅದಕ್ಕೆ ಅಲೇವ್ ಅವರು "Window on my heart" ಎಂದು ಹೆಸರಿಸಿದರು. 'ಈ ಕಥೆ ಹೇಳುವಾಗ ನನ್ನ ತಾಯಿಯವರು ನನಗೆ ನೀಡಿದ ಕೌಟುಂಬಿಕ ದಿನಚರಿ ನನ್ನ ಬಾಲ್ಯದ ಬಗ್ಗೆ ಹೇಳಲು ಸಹಾಯ ಮಾಡಿತು' ಎಂದಿದ್ದಾರೆ.

ಮನೆಯಲ್ಲಿದ್ದರೂ ಮನವೆಲ್ಲಾ ಸ್ಕೌಟಿಂಗ್-ಗೈಡಿಂಗ್‌ನಿಂದಲೇ ತುಂಬಿ ತುಳುಕುತ್ತಿತ್ತು. 1975ರಲ್ಲಿ ಚಿಂತನ ದಿನಾಚರಣೆಯ ಲಾಂಛನವನ್ನು ಅವರ ನೇತೃತ್ವದಲ್ಲಿ ವಿಶ್ವಸಂಸ್ಥೆ ಸ್ವೀಕರಿಸಿತು. ಈ ಚಳವಳಿಯ ಚಿಂತನೆಯ ಜೊತೆ ಜೊತೆಗೆ ಮಹಿಳೆಯರ ಶೋಷಣೆಯ ಬಗ್ಗೆ ಚಿಂತನೆ ಮಾಡಿದರು. ಅದರಲ್ಲೂ 'ಪೂರ್ವ ಆಫ್ರಿಕ ಮಹಿಳಾ ಪರಿಷತ್' ಇಂಫಾಐ ಮೂಲಕ ಹೋರಾಟ ನಡೆಸಿದರು. ಈ ಸಂಘಟನೆಯು ಬ್ರಿಟನ್ನಿನ ಸ್ತ್ರೀಪರ ಹೋರಾಟದ ಸಂಘಟನೆಯ ಉದ್ದೇಶಗಳನ್ನು ಹೊಂದಿತ್ತು. ಇದರ ಮೂಲಕ, ಆಫ್ರಿಕನ್ ಮಹಿಳೆಯರಿಗೆ ಶಿಕ್ಷಣ, ಆರೋಗ್ಯ, ಚರ್ಚುಗಳ ಸೌಲಭ್ಯಗಳು, ಬಾಂಬ್‌ಗೆ ಬಲಿಯಾದ ಮಕ್ಕಳಿಗೆ ಪರಿಹಾರಗಳನ್ನು ಒದಗಿಸಲು ಶ್ರಮಿಸಿದರು



ಗೈಡ್ ಕಛೇರಿಯಲ್ಲಿ ಲೇಡಿ ಬಿ.ಪಿ



ಅಲೇವ್ ಬಿ.ಪಿ.ಯವರು ಗೈಡ್ಸ್‌ಗಳಿಗೆ ಹಸ್ತಲಾಘವ ನೀಡಿದ್ದರು




ಗೈಡ್ಸ್‌ಗಳನ್ನು ಪರಿವೀಕ್ಷಿಸುತ್ತಿರುವುದು



ಫಾಕ್ಸ್‌ಸ್ಲಿ ಗೈಡ್ ತರಬೇತಿ ಕೇಂದ್ರದಲ್ಲಿ
ಗೈಡ್ ಶಿಕ್ಷಕಿಯರ ಶಿಬಿರ



ಧ್ವಜಾರೋಹಣ ಮಾಡುತ್ತಿರುವುದು



ಗೈಡರ್ಸ್‌ಗಳೊಡನೆ ಅಲೇವ್ ಬಿ.ಪಿ



ಅಲೇವ್ ಬಿ.ಪಿ.



ಅಲೇವ್ ಬಿ.ಪಿ.ಯವರು ಕಬ್ಸ್‌ಗಳಿಂದ ವಂದನೆ ಸ್ವೀಕರಿಸುತ್ತಿರುವುದು

## ಸ್ಮೃತಿ : 10

### ಭಾರತದಲ್ಲಿ ಅಲೇವ್

'1921 ಜನವರಿ 8ರಂದು ನಾನು ನನ್ನ ಪತಿಯೊಡನೆ ಮೊದಲಬಾರಿ ಭಾರತಕ್ಕೆ ಬಂದೆ. ಭಾರತವು ರಾಬಿನ್‌ರ ವೃತ್ತಿಯೊಡನೆ ಪ್ರಾರಂಭಿಸಿದ ಮೊದಲ ಸ್ಥಳ. ಈ ರಾಷ್ಟ್ರ ಅವರ ಅಭಿಮಾನಿಪೂರಕ ರಾಷ್ಟ್ರವಾಗಿತ್ತು. ಆಗಾಗ್ಗೆ ಅವರು ಈ ರಾಷ್ಟ್ರದ ಬಗ್ಗೆ ನನಗೆ ಹೇಳುತ್ತಿದ್ದಾಗ, ನನಗೆ ಒಮ್ಮೆ ಈ ರಾಷ್ಟ್ರವನ್ನು ನೋಡಬೇಕೆನಿಸುತ್ತಿತ್ತು. ಅಂತಹ ಅವಕಾಶ ನನಗೆ ಲಭಿಸಿದೆ. ನಾನು ಈ ರಾಷ್ಟ್ರವನ್ನು ನೋಡುತ್ತಾ ಸಭೆಗಳನ್ನು ಉದ್ದೇಶಿಸಿ ಮಾತನಾಡಿದೆ.

ಭಾರತೀಯ ಮಹಿಳೆಯರು ಯುರೋಪಿಯನ್ ಮಹಿಳೆಯರೊಡನೆ ಬೆರೆಯುತ್ತಿರಲಿಲ್ಲ. ಒಮ್ಮೆ ಗೈಡಿಂಗ್‌ಗೆ ಸೇರಿ ಬೆರೆಯಲು ಪ್ರಾರಂಭಿಸಿದ ಮೇಲೆ ಅವರ ನಡುವಿನ ಅಂತರ, ಆತಂಕಗಳು ಕಡಿಮೆಯಾಗುತ್ತಿದ್ದವು.

ನಾವು ಭಾರತದ ವಿವಿಧ ಭಾಗಕ್ಕೆ ಪ್ರವಾಸ ಮಾಡುತ್ತಿದ್ದೆವು. ಎಲ್ಲಿ ಹೋದರಲ್ಲಿ, ಹಗಲಿನಲ್ಲಿ, ರಾತ್ರಿಯಲ್ಲಿ ಸ್ಕೌಟ್-ಗೈಡ್ ಮಕ್ಕಳು, ಹಿರಿಯ ನಾಯಕರು, ಪುಷ್ಪಗುಚ್ಛ ಮತ್ತು ಹೂವಿನ ಹಾರಗಳೊಡನೆ ಹರ್ಷೋದ್ಗಾರ ಮಾಡುತ್ತಾ ನಮಗೆ ಸ್ವಾಗತ ನೀಡುತ್ತಿದ್ದರು. ನಾನು ಸುಮಾರು ಈ ಉಪಖಂಡಗಳನ್ನು 6 ಬಾರಿ ಸಂಚರಿಸಿದ್ದೇನೆ. ಆದರೂ ಆ ಮೊದಲ ಸಂದರ್ಶನದ ಅನುಭವ ಅಪೂರ್ವವಾಗಿಯೇ ಉಳಿದಿದೆ.'

ಬಿ.ಪಿ. ದಂಪತಿಗಳು ಅಂದಿನ ವೈಸ್‌ರಾಯ್‌ಗಳಾದ ಹಾಗೂ ಭಾರತದ ಪ್ರಧಾನ ಸ್ಕೌಟ್ ಮತ್ತು ಗೈಡ್ ಆದ ಲಾರ್ಡ್ ಮತ್ತು ಲೇಡಿ ಚೆಮ್ಸ್‌ಫೋರ್ಡ್ ಅವರನ್ನು ಭೇಟಿ ಮಾಡಿ ಭಾರತದ ಸ್ಕೌಟ್-ಗೈಡ್ ಮಕ್ಕಳ ಸಂಖ್ಯೆ ಬಹಳ ಕಡಿಮೆ ಇತ್ತು. ಈ ಚಳವಳಿಯ ನಾಯಕರು ಗುಂಪುಗಳನ್ನು ಶಿಸ್ತುಗೊಳಿಸುತ್ತಾ, ಧಾರ್ಮಿಕ ಕಾರ್ಯಕ್ರಮದಲ್ಲಿ ಸೇವೆ ಸಲ್ಲಿಸುತ್ತಾ, ವಿವಿಧರೀತಿಯ ಜನಾಂಗ ಜನಾಂಗಗಳ ನಡುವಿನ ಭಿನ್ನತೆಯನ್ನು ಕಡಿಮೆ ಮಾಡಲು ಸಹಾಯಕರಾದರು. ಇದರಿಂದ ಭಾರತೀಯ ಮಹಿಳೆಯರಿಗೆ ಚಳವಳಿಯ ಬಗ್ಗೆ ಹಿಂಜರಿಕೆ ಕಡಿಮೆಯಾಗುತ್ತಾ ಬಂದಿತು.

ಈ ಬಾರಿ ಬರುವಾಗ ಹಳೆಯ ನೆನಪುಗಳೊಡನೆ ರಾಬಿನ್ ಹೊಸ ಸಂದೇಶವನ್ನು ಹೊತ್ತು ತಂದಿದ್ದರು. ಅವರ ಆನಂದಕ್ಕೆ ಪಾರವಿರಲಿಲ್ಲ. ಅಂದು ಅವರು ಸೈನ್ಯಾಧಿಕಾರಿಯಾಗಿ ಬ್ರಿಟಿಷ್ ಸಾಮ್ರಾಜ್ಯದ ಸೇವಕರಾಗಿ ಬಂದಿದ್ದರು. ಇಂದು ಅವರು ವಿಶ್ವಶಾಂತಿ, ವಿಶ್ವ ಭ್ರಾತೃತ್ವ ಸಂದೇಶ ಹೊತ್ತು ಮಾನವ ದೂತರಾಗಿ ಬಂದಿದ್ದರು. ನಾವು ರೈಲಿನಲ್ಲಿ ಪ್ರಯಾಣಿಸಿದೆವು, ಎತ್ತಿನ ಗಾಡಿಯಲ್ಲಿ ಪ್ರಯಾಣಿಸಿದೆವು, ಭಾರತದ ಮುಗ್ಧ ಜನರನ್ನು, ಬಡಜನರನ್ನು ನೋಡಿದೆವು. ಜೊತೆಗೆ ನಯನ ಮನೋಹರವಾದ ಪ್ರಕೃತಿ ಸೌಂದರ್ಯವನ್ನು ಅದರ ಮಧ್ಯೆ ಜೀವಿಸುತ್ತಿರುವ ವರ್ಣರಂಜಿತ ಗುಡ್ಡಗಾಡಿನ ಜನರನ್ನೂ ನೋಡಿದೆವು. ನನಗೆ ಈ ಜನರ ಮೇಲೆ ಪ್ರೇಮ ಉಕ್ಕಿಹರಿಯಿತು.

ಮದರಾಸ್ ನಗರಕ್ಕೆ (ಇಂದಿನ ಚೆನ್ನೈ) ಬಂದೆವು. ಬಿ.ಪಿ.ಯವರು ಅಲೇವ್ ಬಿ.ಪಿ.ಯವರು ಆನಿಬೆಸೆಂಟ್ ಅವರನ್ನು ಭೇಟಿಯಾದರು. ಅವರದು ಹರೆಯದ ವಯಸ್ಸು. ಗಿಡ್ಡನೆಯ ಆಕೃತಿ. ಆದರೂ ಮುಖದಲ್ಲಿ ಆತ್ಮವಿಶ್ವಾಸ ತುಂಬಿ ತುಳುಕುತ್ತಿತ್ತು. ಸದಾ ಭಾರತೀಯ ಉಡುಗೆ ತೊಡುತ್ತಿದ್ದ ಏಕಮಾತ್ರ ಆಂಗ್ಲ ಮಹಿಳೆ ಅವರಾಗಿದ್ದರು. ಅವರು 1893ರಲ್ಲಿ ಭಾರತಕ್ಕೆ ಬಂದು, ಇಲ್ಲಿನ ಆಧ್ಯಾತ್ಮಿಕತೆಗೆ ಹಾಗೂ ಹಿಂದುತ್ವಕ್ಕೆ ಮನಸೋತು ಹಿಂದೂ ಧರ್ಮದ ಅನುಯಾಯಿಯಾಗಿ ಭಾರತದಲ್ಲೇ ನೆಲೆಸಿದವರು. ಕಾಂಗ್ರೆಸ್ಸಿಗರ ಸ್ವಾತಂತ್ರ್ಯ ಹೋರಾಟಕ್ಕೆ ಪ್ರೋತ್ಸಾಹ ನೀಡಿದರು. ಸ್ಥಳೀಯ ಆಡಳಿತ (home rule) ಪದ್ಧತಿಯನ್ನು ಶಿಫಾರಸ್ಸು ಮಾಡಿದರು. ಅದೇ ಸಮಯದಲ್ಲಿ ಶಿಕ್ಷಣ ಪ್ರಚಾರ ಮಾಡಿದರು. ಮದರಾಸಿನಲ್ಲಿ ಹಿಂದೂ ಮಹಾವಿದ್ಯಾಲಯ ತೆರೆದರು. 1899ರಲ್ಲಿ ಗಾಂಧೀಜಿಯುವರು ಪ್ರಾರಂಭಿಸಿದ ಕಾನೂನು ಭಂಗ (civil disobedience) ಚಳವಳಿಯಲ್ಲಿ ಭಾಗವಹಿಸಿದರು. ಎರಡು ವರ್ಷಕ್ಕೆ ಮುನ್ನ ಬ್ರಿಟಿಷ್ ಚಕ್ರವರ್ತಿಗೆ ಅವಿಧೇಯತೆ ತೋರಿದ್ದರಿಂದ ಜೈಲುವಾಸ ಮಾಡಿದರು. ಅವರು ಶಿಕ್ಷಣ ಪ್ರಸಾರ ಮಾಡುವಾಗ ಭಾರತೀಯ ಮಕ್ಕಳಿಗೆ ಸ್ಕೌಟಿಂಗ್–ಗೈಡಿಂಗ್ ಚಳವಳಿಯನ್ನು ಅಳವಡಿಸಿದರು. ಬಿ.ಪಿ.ಯವರು ಅವರನ್ನು ಸ್ಕೌಟ್–ಗೈಡ್ ಫೆಡರೇಷನ್‌ಗೆ ಸೇರಲು ಮನವೊಲಿಸಿ ಅವರಿಗೆ ದೀಕ್ಷೆ ನೀಡಿ ಭಾರತದ ಗೌರವ ಆಯುಕ್ತರನ್ನಾಗಿ ನೇಮಕ ಮಾಡಿದರು. ಅವರು ಬಿರುಗಾಳಿಯಂತೆ ಚಲಿಸುತ್ತಾ ಮಾನವ ಸ್ವಾತಂತ್ರ್ಯಕ್ಕಾಗಿ ತಮ್ಮವರೇ ಆದ ಬ್ರಿಟಿಷರ ವಿರುದ್ಧವೇ ಹೋರಾಡಿದ ಕೆಚ್ಚೆದೆಯ ಮಾನವೀಯತೆಯನ್ನು ಪ್ರತಿಪಾದಿಸಿದ ಮಹಿಳೆ."

ಬೆಂಗಳೂರಿನ ಗ್ರಾಮಂತರ ಜಿಲ್ಲೆಯಲ್ಲಿರುವ, ಸ್ಕೌಟ್–ಗೈಡ್ ರಾಜ್ಯ ತರಬೇತಿ ಕೇಂದ್ರ, ದೊಡ್ಡಬಳ್ಳಾಪುರವನ್ನು ಡಾ. ಅನಿಬೆಸೆಂಟ್‌ರವರ ಸ್ಮರಣಾರ್ಥವಾಗಿ 'ಡಾ. ಅನಿಬೆಸೆಂಟ್ ಪಾರ್ಕ್' ಎಂದು ನಾಮಕರಣ ಮಾಡಿ ಅವರನ್ನು ಗೌರವಿಸಲಾಗಿದೆ.

'ದಕ್ಷಿಣದ ಪ್ರವಾಸದಿಂದ ನಾವು ಉತ್ತರದ ಹಿಮಾಲಯಕ್ಕೆ ಸಾಗಿದೆವು. ರಾಬಿನ್ ಹಿಮಾಲಯ ಪರ್ವತ ಶ್ರೇಣಿಯ ಸೌಂದರ್ಯವನ್ನು ತಮ್ಮ ಚಿತ್ರಕಲೆಯಲ್ಲಿ ಸೆರೆಹಿಡಿದು ಒಂದು ದೊಡ್ಡ ಪುಸ್ತಕವನ್ನು ತಯಾರಿಸಿದರು. ಪ್ರವಾಸ ಮಾಡುತ್ತಾ ಮಾಡುತ್ತಾ ಭಾರತದ ಸ್ಕೌಟ್–ಗೈಡ್‌ನ ವಿವಿಧ ಸಂಸ್ಥೆಗಳನ್ನು ಒಟ್ಟುಗೂಡಿಸುವ ಪ್ರಯತ್ನ ಮಾಡಿದರು. ತಮ್ಮ ಕೆಲಸದಿಂದ ತೃಪ್ತರಾದರು. ನಂತರ ನಾವು ಇಂಗ್ಲೆಂಡಿಗೆ ಮರಳಿದೆವು.

ಇಂಗ್ಲೆಂಡ್‌ಗೆ ಬಂದ ಬಳಿಕ ಬಿ.ಪಿ.ಯವರು ಪುನಃ ಭಾರತಕ್ಕೆ ಬಂದರು. ನಾನು ಅವರೊಡನೆ ಬಂದೆ. ಮೊದಲ ಸ್ಕೌಟ್–ಗೈಡ್ ಜಾಂಬೂರಿಯಲ್ಲಿ ಭಾಗವಹಿಸುವುದು ಅವರ ಉದ್ದೇಶವಾಗಿತ್ತು. 'ಜಾಂಬೂರಿಯಲ್ಲಿ ಸಂತಸದ ವಿಷಯವೆಂದರೆ ಉತ್ತಮ ಸೇವೆಯನ್ನು ಮಾಡಿದ ಸ್ಕೌಟ್–ಗೈಡ್‌ಗಳನ್ನು ಗುರುತಿಸಿ 'ರಾಷ್ಟ್ರಪತಿ ಪುರಸ್ಕಾರ' ನೀಡಿದ್ದು. 80ರ ನನ್ನ ಪತಿಗೆ ತನ್ನ ಪ್ರಿಯವಾದ ದೇಶಕ್ಕೆ ಇದೇ ತನ್ನ ಕೊನೆಯ ಭೇಟಿ ಎಂದು ಅನಿಸಿತ್ತು. ಆ ಸಂದರ್ಭದಲ್ಲಿ ತನ್ನ ಪ್ರೀತಿಯ ಉತ್ತರ–ಪಶ್ಚಿಮ ಗಡಿಗೆ ಭೇಟಿ ನೀಡಿ ಗೌರವ ವಂದನೆ ಸ್ವೀಕರಿಸಿದರು. ಅಂದೇ ಬಿ.ಪಿ.ಯವರ 80ನೇ ಹುಟ್ಟುಹಬ್ಬ. ಲೇಡಿ ಆಥರ್ ಕವಾಯುತ್ತು ಮೈದಾನದಲ್ಲಿದ್ದರು. ಅವರಿಗೆ ಶುಭ ಕೋರಿದರು. ಕಾಕತಾಳೀಯವೆಂಬಂತೆ ನನ್ನ 80ನೇ ಹುಟ್ಟುಹಬ್ಬದ ದಿನವೂ ವೆಸ್ಟ್ ಮಿನಿಸ್ಟರ್ಸ್ ಅಬೇಯಲ್ಲಿ ಅವರು ಬಂದು ನನಗೆ ಶುಭ ಕೋರಿದರು. ಈ ಬಾರಿ ಭಾರತ ಬದಲಾಗಿತ್ತು. ಜನರು ಭಾರತದ ಸ್ವಾತಂತ್ರ್ಯದ ಕನಸು ಕಾಣುತ್ತಿದ್ದರು. ಅದರ ಬಗ್ಗೆ ಮಾತನಾಡುತ್ತಿದ್ದರು, ಯೋಚಿಸುತ್ತಿದ್ದರು, ಓದುತ್ತಿದ್ದರು. ಅದಕ್ಕಾಗಿ ಹೋರಾಟ ನಡೆಸುತ್ತಿದ್ದರು. 'ನಾಗರಿಕ ಅಸಹಕಾರ' ಚಳವಳಿ ನಡೆಯುತ್ತಿತ್ತು. ಬ್ರಿಟಿಷ್‌ರ ಆಡಳಿತವನ್ನು ವಿರೋಧಿಸಿ ಕಾಂಗ್ರೆಸ್ಸಿಗರು ತಂಡೋಪತಂಡವಾಗಿ ಜೈಲು ಸೇರುತ್ತಿದ್ದರು. ಬ್ರಿಟಿಷರು ತಮ್ಮ ರಕ್ಷಣೆಗಾಗಿ ಭದ್ರಕಾವಲನ್ನು ಹೊಂದಿದ್ದರು."

ಈ ಪರಿಸ್ಥಿತಿ ಮತ್ತು ಜಾಗೃತಿ 1936ರಲ್ಲಿ ಬ್ರಹ್ಮೋಬಾಲಿಕಾ ಪಾಠಶಾಲೆ

ಕಲ್ಕತ್ತಾದ ಮೇಲೆ ಬಲವಾದ ಪ್ರಭಾವ ಬೀರಿತು. ಪ್ರತಿಜ್ಞೆಯಲ್ಲಿದ್ದ 'ರಾಜರಿಗೆ ನಿಷ್ಠೆಯನ್ನು' ವಿರೋಧಿಸಿದರು. ಅನೇಕ ಚರ್ಚೆ ಮತ್ತು ಸಂಧಾನದಿಂದ 'ರಾಜನಿಗೆ ನಿಷ್ಠೆ'ಯನ್ನು 'ದೇಶಕ್ಕೆ ನಿಷ್ಠೆ' ಎಂದು 1946ರಲ್ಲಿ ಬದಲಾಯಿಸಲಾಯಿತು. ಇದಕ್ಕೆ ಬಿ.ಪಿ.ಯವರ ಹಾಗೂ ನನ್ನ ಸಹಮತವಿತ್ತು ಅಂಗೀಕರಿಸಲಾಯಿತು.

ಬಿ.ಪಿ.ಯವರನ್ನು ದೆಹಲಿಯಲ್ಲೇ ಬಿಟ್ಟು ತಾವೇ ದೇಶದ ಉದ್ದಗಲಕ್ಕೂ ಸ್ಕೌಟಿಂಗ್-ಗೈಡಿಂಗ್ ಬಲವನ್ನು ಗಮನಿಸಲು ಹೊರಟರು. ಗೈಡಿಂಗ್ ಹೆಣ್ಣುಮಕ್ಕಳಲಿ ಪ್ರಚಾರವಾಗುತ್ತಿದೆ. ಮಹಿಳೆಯರು ತಮ್ಮ ಸಂಪ್ರದಾಯದಿಂದ ಹೊರಬಂದು ಭಾಗವಹಿಸುತ್ತಿರುವುದನ್ನು ನೋಡಿ, ಚಳವಳಿಯ ದೃಷ್ಟಿಯಿಂದ, ಭಾರತೀಯ ಮಹಿಳೆಯರ ದೃಷ್ಟಿಯಿಂದ ನನಗೆ ಸಂತಸವಾಯಿತು. ಹೋದಲ್ಲೆಲ್ಲಾ ಅಭೂತಪೂರ್ವ ಸ್ವಾಗತ, ಕೈಕುಲಕಿದ ಆನಂದ ಸದಾ ನನ್ನ ನೆನಪಿನಲ್ಲಿದೆ. ಭಾರತದ ಪ್ರವಾಸ ಮುಗಿಸಿ ಮರಳಿ ಬಂದೆವು' ಎಂದಿದ್ದಾರೆ.

1960ರಲ್ಲಿ ಪುನಃ ಅಲೇವ್ ಭಾರತಕ್ಕೆ ಬಂದರು. ಈ ಬಾರಿ ಅವರ ಜೊತೆ ಅವರ ಪ್ರಿಯ ರಾಬಿನ್ ಇರಲಿಲ್ಲ. ಭಾರತ ಸ್ವಾತಂತ್ರವಾಗಿತ್ತು. ಭಾರತದಲ್ಲಿ ವೈವಿಧ್ಯಮಯ ಜಾತಿ, ಧರ್ಮಗಳ ಸೌಹರ್ದತೆಗಾಗಿ ಗೈಡಿಂಗ್, ಹೆಣ್ಣು ಮಕ್ಕಳು ಮತ್ತು ಮಹಿಳೆಯರು ಸೇವೆಗೆ ಹೆಚ್ಚು ಅವಶ್ಯಕವೆಂದು ಮನಗಂಡರು. ಒಂದಾಗಿದ್ದ ಭಾರತ, ಪಾಕಿಸ್ತಾನದ ಮಧ್ಯೆ, ಬರ್‌ಲಿನ್ ಗೋಡೆಯಂತೆ ಮುಳ್ಳುತಂತಿ ಬೇಲಿ, ಅಕ್ಕಪಕ್ಕದಲ್ಲಿ ಸಶಸ್ತ್ರಧಾರಿ ರಕ್ಷಣಾಪಡೆಗಳು ಗಸ್ತು ತಿರುಗುತ್ತಿರುವುದನ್ನು ನೋಡಿ ಅತೀವ ಖೇದವಾಯಿತು. ಹೀಗೆ ಗೈಡಿಂಗ್‌ನಲ್ಲಿ ಆಗದಿರಲಿ ಎಂದು ಪ್ರಾರ್ಥಿಸಿದೆ. 'ಈಗಾಗಲೇ ಭಾರತ ಮತ್ತು ಪಾಕಿಸ್ತಾನದಲ್ಲಿ 'ಸಾಕ್ಷರತಾ ಯೋಜನೆ'ಯಲ್ಲಿ ಸ್ಕೌಟ್-ಗೈಡ್‌ಗಳು ಪಾಲ್ಗೊಳ್ಳುತ್ತಿದ್ದರು. ಅಲ್ಲದೆ 'ಉದ್ಯಾನವನ, ತೋಟಗಳನ್ನು ಬೆಳೆಯುವುದರಲ್ಲೂ ಭಾಗವಹಿಸುತ್ತಿದ್ದರು. ಈ ಹಿನ್ನಲೆಯಲ್ಲಿ ಭಾರತ ಮತ್ತು ಪಾಕಿಸ್ತಾನ ಗೈಡ್ಸ್‌ಗಳನ್ನು ಒಟ್ಟುಗೂಡಿಸಿ ಹಸ್ತಲಾಘವ ಮಾಡಿಸಿದೆ. ಗೈಡ್ಸ್‌ಗಳು ಪುನರ್‌ಮಿಲನದಿಂದ ಭಾವೋದ್ವೇಗಕ್ಕೆ ಒಳಗಾಗಿ ಆನಂದಬಾಷ್ಪವನ್ನು ಸುರಿಸಿದರು. ನಂತರ ನಾನು ಪ್ರಥಮದರ್ಜೆಯಲ್ಲಿ ಸುಖಕರವಾಗಿ ಪ್ರಯಾಣವನ್ನು ಮುಂದುವರೆಸಿದೆ. ರೈಲಿನಲ್ಲಿ ಬಡವರು, ಚಿಕ್ಕ ಜಾಗದಲ್ಲಿ ಕುರಿಮಂದೆಯಂತೆ ತುಂಬಿಕೊಂಡು

ಪ್ರಯಾಣ ಮಾಡುತ್ತಿದ್ದರು. ಸಹ ಪ್ರಯಾಣಿಕರೊಡನೆ ಗುದ್ದಾಡಿ ಅವರಿಗೆ ಸ್ಥಳ ಮಾಡಿಕೊಡಲು ಮುಂದಾದೆ. ದೆಹಲಿಗೆ ಬಂದೆ. ಪ್ರಧಾನಿ ನೆಹರು ಅವರ ಮಗಳು ಇಂದಿರಾಗಾಂಧಿ ಹಾಗೂ ಮೊಮ್ಮಕ್ಕಳೊಡನೆ ಉಪಹಾರ ಮಾಡಿದೆ. ಬರಿಗಾಲಿನಲ್ಲಿ ನಡೆದು ಮಹತ್ಮಾಗಾಂಧಿಯವರ ಸಮಾಧಿಗೆ ಹೋಗಿ ಪುಷ್ಪಗುಚ್ಛ ಅರ್ಪಿಸಿದೆ. ಪಚ್‌ಮಡಿಯಲ್ಲಿ ಫೆಬ್ರವರಿ 22ರಂದು ಚಿಂತನಾ ದಿನಾಚರಣೆಯಲ್ಲಿ ಭಾಗವಹಿಸಿದೆ. ಈ ದಿನಚರಣೆಯಲ್ಲಿ ಹಿಂದೂ, ಮುಸ್ಲಿಂ, ಪಾರ್ಸಿ ಮತ್ತು ಕ್ರಿಶ್ಚಿಯನ್ ಗೈಡ್ಸ್ ಭಾಗವಹಿಸಿದ್ದರು. ನಂತರ ಇಂಗ್ಲೆಂಡಿಗೆ ಮರಳಿದೆ.'

1961ರಲ್ಲಿ ಅಖಿಲ ಭಾರತ ಜಾಂಬೂರಿ ಬೆಂಗಳೂರಿನ ಇಂದಿನ ಸ್ಯಾಂಕಿ ರಸ್ತೆಯಲ್ಲಿರುವ ರಮಣಶ್ರೀ ಆಶ್ರಮದ (ಆಗ ಇರಲಿಲ್ಲ)ಬಯಲಿನಲ್ಲಿ ನಡೆಯಿತು. ಇದಕ್ಕೆ ಅಲೇವ್ ಬಿ.ಪಿ.ಯವರು ಬಂದಿದ್ದರು. ಅವರು ಎಲ್ಲರೊಡನೆ ಸರಳವಾಗಿ ಸಂತಸವಾಗಿ ಬೆರೆಯುತ್ತಾ ಸಮಾವೇಶಕ್ಕೆ ಸ್ಫೂರ್ತಿಯನ್ನು ನೀಡಿದರು. 12 ಸಾವಿರ ಸ್ಕೌಟ್-ಗೈಡ್ಸ್ ಮಕ್ಕಳು ಸೇರಿದ್ದರು. ಒಬ್ಬರಿಗೊಬ್ಬರು ಸ್ನೇಹದಿಂದ ಪರಸ್ಪರ ಜ್ಞಾನ ಮತ್ತು ಕೌಶಲಗಳನ್ನು ವಿನಿಮಯ ಮಾಡಿಕೊಳ್ಳುತ್ತಾ ತಮಗರಿವಿಲ್ಲದೆ ಜೀವನ ಶಿಕ್ಷಣವನ್ನು ಪಡೆಯುತ್ತಿದ್ದರು. ಅವರಿಗೆ ಬೆಳ್ಳಿ ಆನೆ ರಾಷ್ಟ್ರಪುರಸ್ಕಾರ ನೀಡಿ ಗೌರವಿಸಲಾಯಿತು.

ಭಾರತೀಯ ಗೈಡ್ ಅಲೇವ್ ಅವರನ್ನು ವಂದಿಸುತ್ತಿರುವುದು 1960ರಲ್ಲಿ ಸದಾಶಿವನಗರದಲ್ಲಿ (ಇಂದಿನ ರಮಣಶ್ರೀ ಆಶ್ರಮ)ದಲ್ಲಿ ನಡೆದ ರಾಷ್ಟ್ರೀಯ ಜಾಂಬೂರಿಯಲ್ಲಿ ಉಷಾ ರಾಮಯ್ಯ (ಸರ್ ಪೇಸಕರ್) ಮಾಜಿ ಕಾರ್ಯಲಯ ನಿರ್ವಾಹಕಿ ಹಾಗೂ ಪರ್ವತರೋಹಿ ಲೇಡಿ ಅಲೇವ್ ಬೇಡನ್ ಪಾವೆಲ್ ಅವರ ಸಂಗಡಿಗರೊಡನೆ ಅಲೇವ್ ರವರು ಸೈಕಲ್ ರಿಕ್ಷಾದಲ್ಲಿ ಪೂನಾಕ್ಕೆ ಬರುತ್ತಿರುವುದು (1966) ಅಲೇವ್‌ರವರು ಸೀರೆಯಲ್ಲಿ ರಾಷ್ಟ್ರೀಯ ಆಯುಕ್ತರಾದ ಶ್ರೀಮತಿ ಲಕ್ಷ್ಮೀ ಮುಜಮ್‌ರವರ ಜೊತೆ





ಭಾರತೀಯ ಗೈಡ್ ಅಲೇವ್ ಅವರನ್ನು ವಂದಿಸುತ್ತಿರುವುದು



1960ರಲ್ಲಿ ಸದಾಶಿವನಗರದಲ್ಲಿ (ಇಂದಿನ ರಮಣಶ್ರೀ ಆಸ್ರಮ)ದಲ್ಲಿ ನಡೆದ ರಾಷ್ಟ್ರೀಯ ಜಾಂಬೂರಿಯಲ್ಲಿ ಶ್ರೀಮತಿ ಉಷಾ ರಾಮಯ್ಯ (ಸರ್ ಪೇಸಕರ್) ಮಾಜಿ ಕಾರ್ಯಲಯ ನಿರ್ವಾಹಕಿ ಹಾಗೂ ಪರ್ವತಾರೋಹಿ ಲೇಡಿ ಅಲೇವ್ ಬೇಡನ್ ಪಾವೆಲ್ ಅವರ ಸಂಗಡಿಗರೊಡನೆ



ಅಲೇವ್‌ರವರು ಸೈಕಲ್ ರಿಕ್ಷಾದಲ್ಲಿ ಪೂನಾಕ್ಕೆ ಬರುತ್ತಿರುವುದು (1966)



ಅಲೇವ್‌ರವರು ಸೀರೆಯಲ್ಲಿ ರಾಷ್ಟ್ರೀಯ ಆಯುಕ್ತರಾದ
ಶ್ರೀಮತಿ ಲಕ್ಷ್ಮೀ ಮುಜುಮ್‌ರವರ ಜೊತೆ

# ಸ್ಮೃತಿ : 11

## ಅಲೇವ್ ಅವರ ಅಂತಿಮ ದಿನಗಳು

ಅಲೇವ್ ಅವರಿಗೆ 80 ವರ್ಷ ತುಂಬಿತ್ತು ಅವರ ಚಟುವಟಿಕೆಗಳ ನಡುವೆಯು ಬಳಲಿಕೆ ತೋರುತ್ತಿತ್ತು. ವೈದ್ಯರು ವಿಶ್ರಾಂತಿಯನ್ನು ತೆಗೆದುಕೊಳ್ಳಬೇಕೆಂದಿದ್ದರು. ವಿಶ್ರಾಂತಿಯಲ್ಲೂ ಅವಿಶ್ರಾಂತವಾಗಿ ಚಳವಳಿಯ ಬಗ್ಗೆ ಚಿಂತಿಸುತ್ತಿದ್ದರು. ಈ ಸಂದರ್ಭಗಳಲ್ಲಿ ಸ್ಕೌಟ್-ಗೈಡ್‌ಗಳಿಗೆ ಒಂದು ಸಂದೇಶವನ್ನು ನೀಡಿದರು. ‘ನಾನು ದೈವಾಧೀನಳಾದಾಗ ನನಗಾಗಿ ದುಃಖಿಸಬೇಡಿ. ಬದಲಿಗೆ ಸಂತೋಷವಾಗಿರಿ. ಈಗ ನಿಮಗೆ ಕೊಡುವುದಕ್ಕೆ ನನ್ನ ಬಳಿ ಏನೂ ಉಳಿದಿಲ್ಲ. ಚಳವಳಿಗೆ ಎಲ್ಲವನ್ನೂ ಕೊಟ್ಟಿದ್ದೇನೆ. ಅದು ಸದೃಢವಾಗಿ ಬೆಳೆದಿದೆ. ನನ್ನ ಮಕ್ಕಳು ಬೆಳೆದು, ತಮ್ಮ ತಮ್ಮ ಉದ್ಯೋಗ ಮಾಡುತ್ತಾ ಜೀವಿಸುತ್ತಿರುವಂತೆ ಈ ಚಳವಳಿಯೂ ನನ್ನ ನೆರವಿಲ್ಲದೆ ಬೆಳೆಯಲು ಸಮರ್ಥವಾಗಿದೆ. ಇದೇ ನಿಮಗೆ ನನ್ನ ಸಂದೇಶ.‘

ಕಾರ್ಯ ಶಿಥಿಲವಾಗಿ ತಮ್ಮ 88ನೇ ವಯಸ್ಸಿನಲ್ಲಿ ಕೊನೆಯ ದಿನಗಳಲ್ಲಿ ವಿಶ್ರಾಂತಿ ಪಡೆಯುತ್ತಿದ್ದಾಗ ಮತ್ತೊಮ್ಮೆ ಈ ಸಂದೇಶವನ್ನು ನೀಡಿದರು. ‘ದೇವರು ನನಗೆ ಕೆಲಸವನ್ನು ಕೊಟ್ಟನು, ಮಾಡಲು ಶಕ್ತಿ ಮತ್ತು ಆರೋಗ್ಯವನ್ನೂ ನೀಡಿದನು. ಅದನ್ನು ಶ್ರದ್ಧೆಯಿಂದ ಮಾಡಿದ್ದೇನೆ. ಸ್ಕೌಟ್-ಗೈಡ್ ಚಳವಳಿಯನ್ನು ಬೃಹತ್ತಾಗಿ ಬೆಳೆಸಲು ಶ್ರಮಿಸಿದ್ದೇನೆ. ಈ ಚಳವಳಿಯು ಪೀಳಿಗೆಯಿಂದ ಹೆಣ್ಣು ಮತ್ತು ಗಂಡು ಮಕ್ಕಳ ಮೇಲೆ ನಂಬಿದ್ದೇನೆ. ಇದೊಂದು ನನ್ನ ಸೌಭಾಗ್ಯವೆಂದು ಭಾವಿಸುತ್ತೇನೆ. ರಾತ್ರಿ ನಿದ್ರಿಸುವಾಗ ಸುಖ ನಿದ್ರೆಗಾಗಿ ದೇವರನ್ನು ವಂದಿಸುತ್ತೇನೆ, ಹೊಸ ಹಗಲನ್ನು ಸ್ವಾಗತಿಸುವಾಗ ದೊರೆಯುವ ಸೇವಾವಕಾಶಗಳಿಗಾಗಿ ವಂದಿಸುತ್ತೇನೆ. ಇಷ್ಟೆಲ್ಲಾ ಸಾಧನೆ ಮತ್ತು ಸಂತಸಗಳ ನಡುವೆಯೂ ನನ್ನ ಪ್ರಿಯತಮ ರಾಬಿನ್ ಅವರೊಡನೆ ಕಳೆದ 29 ವರ್ಷಗಳ ನೆನಪು ಸದಾ ನಿರಂತರವಾಗಿ ನನ್ನೊಡನೆ ಸಾಗುತ್ತಿದೆ"

ನನಗೆ ಇಂದಿಗೂ ಅವರ ಮಾತು ಕೇಳಿಬರುತ್ತಿದೆ. ಅವರ ಕೊನೆಯ ಪತ್ರ ನೆನಪಿಗೆ ಬರುತ್ತಿದೆ. "Dindo darling I shall be waiting for you" ‘ಪ್ರಿಯತಮೆ, ಡಿಂಡೋ, ನಾನು ನಿನಗಾಗಿ ಕಾಯುತ್ತಿರುತ್ತೇನೆ’ ಎಂದು ಅವರು

ಬರೆದ ಕೊನೆಯ ಪತ್ರದ ಕೊನೆಯ ಸಾಲು ಕೇಳಿಸುತ್ತಿದೆ. 'ನನಗಾಗಿ ರಾಬಿನ್ ಕಾಯುತ್ತಿದ್ದಾರೆ. ನಾನು ಅವರನ್ನು ಬೇಗ ಸೇರಬೇಕು.'

ಅಲೇವ್ ಅವರು ಹೀಗೆ ಪತಿಯವರನ್ನು ಸ್ಮರಿಸುತ್ತಾ ಅವರನ್ನು ಸೇರಲು ತವಕಿಸುತ್ತಾ ತಮ್ಮನ್ನು ಸಂದರ್ಶಿಸಲು ಬರುವವರೊಡನೆ ನೋವು ನಲಿವನ್ನು ಹಂಚಿಕೊಳ್ಳುತ್ತಾ ಅವರ ಯೋಗಕ್ಷೇಮವನ್ನು ವಿಚಾರಿಸುತ್ತಾ, ಚಳವಳಿಗೆ ಸ್ಫೂರ್ತಿಯನ್ನು ನೀಡುತ್ತಲೇ 88ನೇ ವಯಸ್ಸಿನಲ್ಲಿ 1977 ಜೂನ್ 6ರಂದು ನಿದ್ರೆಯಲ್ಲೆ ಸುಖವಾದ ಸಾವನ್ನಪ್ಪಿದರು.

ಅಲೇವ್ ಅವರು ತುಂಬು ಜೀವನವನ್ನು ನಡೆಸಿದರು. ಅವರ ಸ್ಫೂರ್ತಿ, ಆದರ್ಶ ಮತ್ತು ಸಂದೇಶಗಳು ನಮ್ಮ ಜೀವನಕ್ಕೆ ದಾರಿದೀಪವಾಗಿದೆ. ನಾವು ಇವುಗಳನ್ನು ಇಂದಿನ ಯುವಜನಾಂಗಕ್ಕೆ ಮಾತ್ರ ನೀಡದೆ ಮುಂದಿನ ಯುವಜನಾಂಗಕ್ಕೂ ಪಾರಂಪರಿಕವಾಗಿ ನೀಡಬೇಕಾಗಿದೆ. ಈ ಚಳವಳಿ ನಿರಂತರವಾಗಿ, ಸದೃಢವಾಗಿ, ಶಾಶ್ವತವಾಗಿ ಮುಂದುವರಿಯುತ್ತದೆ ಎಂಬ ದೃಢ ವಿಶ್ವಾಸವನ್ನು ಹೊಂದಿದ್ದೇನೆ. ನಾವು ಸಹ ಅಲೇವ್‌ರಂತೆ ಸ್ನೇಹ, ಸಂತಸದ, ಸಾರ್ಥಕ ಬದುಕಿನ ಕಲೆಯನ್ನು ಹಂಚಿಕೊಳ್ಳುತ್ತಾ ಶಾಂತಿಯಿಂದ ಕೂಡಿದ ಸಮಾಜದ ನಿರ್ಮಾಣಕ್ಕೆ ಕಾರಣರಾಗೋಣ.

ಗರ್ಲ್ ಸ್ಕೌಟ್ ಮತ್ತು ಗರ್ಲ್ ಗೈಡ್ಸ್‌ನ 100 ವರ್ಷದ ಶುಭಾಶಯಗಳು

ಸ್ಕೌಟಿಂಗ್-ಗೈಡಿಂಗ್ ಚಿರಾಯುವಾಗಲಿ.



ಅಲೇವ್‌ರವರ 80ನೇ ಹುಟ್ಟುಹಬ್ಬ
22ನೇ ಫೆಬ್ರವರಿ ಅಂತಿಮ
ದಿನಗಳ ಚಿತ್ರ



ಕೊನೆಯ ದಿನಗಳಲ್ಲಿ ತಮ್ಮ
ಪ್ರೀತಿಯ ಸಂಗಾತಿ
ಟೈಪ್‌ರೇಟ್‌ರೊಡನೆ



1971ರಲ್ಲಿ ಕಲಾಕಾರನ ಎದುರಲ್ಲಿ
ಪ್ರತಿಕೃತಿ ತಯಾರಿಸಲು
ಕುಳಿತಿರುವುದು.

## ಸ್ಮೃತಿ : 12

## ವಿಶ್ವ ಪ್ರಧಾನ ಗೈಡ್-ಅಲೇವ್ ಬಿ.ಪಿ.ಯವರು ಆಕಾಶವಾಣಿ, ಹೈದರಾಬಾದ್‌ನಿಂದ ಬಿತ್ತರಿಸಿದ ಭಾಷಣ

Recorded at Hyderabad - 25th February 1964

I am very grateful to "All India Radio", that now-on the eve of my departure for India, I am thus able to speak to the Bharat Scouts and Guides and their leaders and to now express to them all renewed thanks for the wonderful and kindly welcomes that have been shown to me throughout this most enjoyable tour that I have made during these past weeks.

I have been most touched by friendliness shown to me on every side; and I am deeply grateful for all these songs of the true spirit of Guiding and Scouting and for the demonstrations of good will, by those who are supporters of our Movement and the parents of the young people who belong to this Movement that my husband founded and of which we are now all members together.

I came to India first, with my husband, forty years ago, He had come here himself as a very young man FORTY SIX years before that, spending many years of his early life in this country, and HE LOVED IT.

It was one of the most outstanding days of our life together when-in 1921 we came to see the Guides and Scouts of that generation, and he was at long lost able to what he called "Shown me his India" and our tour on that occasion was stirring and a very joyous experience.

We came again in 1937 for a fine and deeply impressive "All India Jamboree", held in Delhi; and during this Tour that I have just completed, I have met many me who have come to shake me by the hand and reminded me of our former meetings in this country on those two occasions, as well as at various other WORLD JAMBOREES held in Austria, in Canada, in France, in England or in Holland - Since India has proudly sent fine contingents to these periodical great Scout gatherings that are held at intervals of intervening years.

And now what a DELIGHT it has been to me to meet such numbers of the PRESIDENT generation of Guides out Scouts, all obviously imbued with real zeal for carrying out their activities successfully, not only for their own enjoyment and their own good, but for the good of the community and the country as a whole.

The Character Training programme has the same appeal to them now here, as it has to thousands and MILLIONS of other boys and girls all over the world, helping them to fit them for their tasks in adult life.

It was during my husband's many years in India that the plan for "Scouting" as a Training programme for boys was first home in his mind, as he saw that "the BOY is the MAN in the making" and the movement has proved its value fully as the years have gone by comes with its own specialised programme for developing the finest feminine qualities in those who will become the leaders of thought and action, the home makers and wives and mothers in days to come.

"The strength of a nation depends on the homes of its people" is a right saying, but very true; and as we look ahead into the future I am confident that the Bharat Scouts and Guides today are going to be a vast NATIONAL ASSET as they carry the high tradition of the Movement into the daily life of the land.

I speak with confidence in this way, from having seen so much evidence on this tour to many parts of India, and from having head so many good accounts of work undertaken and helpful service being rendered in many directions.

Rallies both large and small have been organised and held in many places where hundreds of eager Scouts and Guides have gathered together and shown of their and been encouraged towards a higher standard of Scout-Craft and Guide-Craft through contact with others.

The ALL INDIA Jamboree held at Bangalore was an outstanding success, where over twelve thousand came together at their own personal expense of time and effort and money, and shared experience which had its own value at the time as well as in its after effects since they met there Scouts and Guides from every part of the country and thus formed lasting friendships and gained knowledge and understanding of one another's points of view

Blind and Deaf Scouts and Guides, who through being members of the Movement are not defrauded of the joys and interests of other children and carry out their Scouting and Guiding fully and well, have attended Refugee camps at Bansberia was one of the most impressive and moving

experiences of my life. Here, though being drawn into the Fellowship of the Guide Movement, these young girls being given helpful training for their material well being but what otherwise is darkened background of misfortune. And one of the loveliest events also of the tour has been a most happy visit to Pachmarhi, your newly built Guide House, which will be such a boon to your Guide work here, as well as a delight for Guides and Guiders to come to from other countries too.

Throughout these weeks of my tour it has been my privilege to meet as leaders of the Bharat Scouts & Guides Movements hundreds of men and women of the highest caliber giving their personal services voluntarily and effectively to the young generation outstanding GREAT PEOPLE INDEED.

Year by year this work is progressing thanks to them and their tireless efforts, as they courageously over-come the many handicaps of distances, languages, the shortage of many, and the lack of sufficient MEN AND WOMEN to share this vital task with them for bringing Scouting and Guiding within the reach of many more thousands of young boys and girls, to whom it could mean so much.

How richly they deserve all possible support as they go on giving of their good example to the young people of your land.

I wish in all sincerely to pay my warmest tribute to them and I feel confident that the SCOUTS and the GUIDES and BULBULS and the CUBS will continue to play with energy, and make their branch of this great WORLD FELLOWSHIP as fine

and as good in QUALITY as well as in QUANTITY as any of the branches in the other country throughout the world.

And so now I must say good-bye and I leave with you all my cordial thanks for my very happy time in your midst.

And with my thanks I also leave my very warmest good wishes.

May GOOD FORTUNE BE WITH YOU, as you go along and ahead and keep your GUIDE/SCOUT LAW with happy success as the years go by.

Courtesy : The Bharat Scouts and Guides

## ಸ್ಮೃತಿ : 13

## ಅಲೇವ್ ಅವರ ಸೇವೆ-ಪುರಸ್ಕಾರ

ಅವರ ನಿಸ್ವಾರ್ಥತೆಯಿಂದ, ಪ್ರಾಮಾಣಿಕವಾಗಿ, ನಿರಂತರವಾಗಿ ಮಾಡಿದ ಸ್ಕೌಟ್-ಗೈಡ್ ಸೇವೆಗಾಗಿ "ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ" ಮಟ್ಟದಲ್ಲಿ ಅನೇಕ ಪುರಸ್ಕಾರಗಳು ದೊರೆತವು

1918 : Silver Fish-award. Scouts & Guides Association of Britain

1932 : Dance Grand cross - Award of Honour by Britain

1933 : Medal of Merit - Poland

1934 : White Rose - Finland

1950 : Order of Silver Phonix

1950 : Freedom of Poale - Dorset

1951 : Medal of Honour

1959 : Order of Vasco - Nunez

1959 : The Sun of Peru

1959 : Del Merito - Chile

1961 : Silver Elephant - India

1963 : The Sacred Treasure - Japan

1965 : Ducal Crown of Oakes

1965 : Gold Cross - San Selvador

1970 : Diamond - South Africa ವಜ್ರವನ್ನು ಮಾರಿ ಹಣವನ್ನು ಗೈಡ್ಸ್‌ಗಳ ಕ್ಷೇಮಾಭಿವೃದ್ಧಿ ನಿಧಿಗೆ ನೀಡಿದ್ದಾರೆ. ಬಿ.ಪಿ.ಯವರು ತಮಗೆ ಬಂದ ಎಲ್ಲಾ ಪುರಸ್ಕಾರಗಳನ್ನು. ಕೊಡುಗೆಗಳನ್ನು ಸ್ಕೌಟ್-ಗೈಡ್ ವಸ್ತು ಸಂಗ್ರಹಾಲಯಕ್ಕೆ ನೀಡಿದ್ದಾರೆ.

## ಸ್ಮೃತಿ : 14

## ಅಲೇವ್ ಬೇಡನ್ ಪೊವೆಲ್ ಸಂಘ –OBPS

ಅಲೇವ್ ಅವರು ನಿರಂತರವಾಗಿ ಶ್ರಮಿಸುತ್ತಾ ಕಾಳಜಿಯಿಂದ ಬೆಳೆಸಿದ ಗೈಡ್ ಚಳವಳಿಯು ವಿಶ್ವದಲ್ಲೇ ಅಗ್ರಮಾನ್ಯ ಸ್ಥಾನವನ್ನು ಪಡೆದಿದೆ. ಈ ಮಹಾನ್ ನಾಯಕಿಯ ನೆನಪಿನಲ್ಲಿ ಅಂತರರಾಷ್ಟ್ರೀಯ ಮಟ್ಟದಲ್ಲಿ "ಅಲೇವ್ ಬೇಡನ್ ಪೊವೆಲ್ ಸಂಘ"ವನ್ನು ಸ್ಥಾಪಿಸಲಾಯಿತು.

ಇದರ ಉದ್ದೇಶ – ವಿಶ್ವದೆಲ್ಲೆಡೆ WAGGGS ಕ್ರಿಯಾಶೀಲ ಸೇವಾ ಚಟುವಟಿಕೆಗಳನ್ನು ಹಮ್ಮಿಕೊಳ್ಳುವುದು ಮತ್ತು ಗರ್ಲ್–ಸ್ಕೌಟ್–ಗೈಡ್ಸ್‌ಗಳನ್ನು ಇದರಲ್ಲಿ ತೊಡಗಿಸುವುದು. ಈ ಚಳವಳಿಯ ಉದ್ದೇಶ ಉದಾತ್ತವಾಗಿ ಸೇವೆ ಸಲ್ಲಿಸಿದವರನ್ನು ಗುರುತಿಸುವುದು, ಗೌರವಿಸುವುದೂ ಆಗಿದೆ.

ಈ ಸಂಸ್ಥೆಗೆ ಸದಸ್ಯರಾಗಲು US$ 7500 ಅಥವಾ ಸಂಘವು ಗೊತ್ತುಪಡಿಸಿದ ಮೊತ್ತವನ್ನು ಒಂದೇಬಾರಿಗೆ ಅಥವಾ ಕಂತಿನಲ್ಲಿ ನೀಡಬಾಹುದು. US$ 12000 ಅಥವಾ ಅದಕ್ಕೂ ಹೆಚ್ಚು ನೀಡಿದರೆ ಮರಣಾಂತರವೂ ಅವರ ಹೆಸರು ಪಟ್ಟಿಯಲ್ಲಿ ಉಳಿಯುವುದು. ಜೀವವಿಮೆ (LIC) ಅಥವಾ ಮರಣಶಾಸನದ (will) ಮೂಲಕವೂ ಸದಸ್ಯರಾಗಬಹುದು.

ತಮಗೆ ಬೇಕಾದ ವ್ಯಕ್ತಿಯ ಹೆಸರಿನಲ್ಲಿ ದೇಣಿಗೆ ನೀಡಿ ಆ ವ್ಯಕ್ತಿಯನ್ನೂ ಸದಸ್ಯರನ್ನಾಗಿ ಮಾಡಬಹುದು. ವ್ಯಕ್ತಿ ಅಥವಾ ಗುಂಪು ಸದಸ್ಯತ್ವ ಪಡೆಯಬಹುದು. ಈ ಸಂಸ್ಥೆಗೆ ಸದಸ್ಯರಾದರೆ, ಸದಸ್ಯರಾದವರಿಗೆ ಸಂಸ್ಥೆಯ ಪ್ರಧಾನ ಪೋಷಕರಿಂದ ವಿಶೇಷ ಸಮಾರಂಭದಲ್ಲಿ ಪ್ರಮಾಣಪತ್ರ ಮತ್ತು ನೆನಪಿಕೆಯನ್ನು (Insignia) ಪ್ರದಾನ ಮಾಡುವರು. ಅಲೇವ್ ಕೇಂದ್ರ ಲಂಡನ್ನಿನಲ್ಲಿ ಗೋಡೆ ಫಲಕದ ಮೇಲೆ ಸದಸ್ಯರ ಹೆಸರು ಮತ್ತು ದೇಶವನ್ನು ಕೆತ್ತಿಸಿ ಪ್ರದರ್ಶಿಸಲಾಗುವುದು. ಈ ವಿಶೇಷ ಗುಂಪಿನ ಸದಸ್ಯರನ್ನು ಭೇಟಿಯಾಗಲು ಸಂಘವು ನಿಮ್ಮನ್ನು ಸಮಾರಂಭಕ್ಕೆ ಆಹ್ವಾನಿಸುವುದು.

**ಅಲೇವ್ ಪುರಸ್ಕಾರ:**

WAGGGS ಪ್ರಕಟಿಸಿದ ಸೇವಾ ಚಟುವಟಿಕೆಯಲ್ಲಿ ಒಂದನ್ನು ನೀವು ಸೇವೆ ಸಲ್ಲಿಸುವ ಸಮುದಾಯದ ಅವಶ್ಯಕತೆಗೆ ತಕ್ಕಂತೆ ಆರಿಸಿಕೊಂಡು, ನಿರಂತರವಾಗಿ ತಮ್ಮ ದೇಶದಲ್ಲಿ ಅಥವಾ ಹೊರದೇಶದಲ್ಲಿ ಸಲ್ಲಿಸುವ ವಿಶೇಷ ಸೇವೆಗೆ ಈ ಪುರಸ್ಕಾರವನ್ನು ನೀಡಲಾಗುತ್ತದೆ. ಸೇವೆಯನ್ನು ಆಯ್ಕೆ ಮಾಡಿಕೊಂಡು ರಾಜ್ಯ ಸಂಸ್ಥೆಯ ಮೂಲಕ ರಾಷ್ಟ್ರ ಸಂಸ್ಥೆಗೆ ಅರ್ಜಿಯನ್ನು ಸಲ್ಲಿಸಬೇಕು. ಈ ಸೇವಾ ಕಾರ್ಯವನ್ನು ವ್ಯಕ್ತಿಯಾಗಲಿ ಗುಂಪುಗಳಾಗಲಿ ಮಾಡಬಹುದು. ಆಯ್ಕೆ ಅನುಮೋದನೆಯ ನಂತರ ಸೇವಾ ಕಾರ್ಯವನ್ನು ಮಾಡಿ ಸೇವೆ ಕುರಿತು ದಿನಚರಿ ಪುಸ್ತಕ (Log Book) ತಯಾರಿಸಬೇಕು. ಇದರಲ್ಲಿ ಸೇವೆಯ ವಿವರ, ಪ್ರಮಾಣ ಪತ್ರಗಳು, ವರದಿ, ಭಾವಚಿತ್ರ, ಅಭಿಪ್ರಾಯ ಮೆಚ್ಚಿಗೆ ಪತ್ರಗಳು, ಫಲಾನುಭವಿಗಳ ಅನಿಸಿಕೆಗಳನ್ನು ಲಗತ್ತಿಸಬೇಕು. ಈ ಪುಸ್ತಕವನ್ನು ರಾಷ್ಟ್ರ ಕಛೇರಿಗೆ ಸಲ್ಲಿಸಬೇಕು. ಅವರು ಆಯ್ಕೆ ಮಾಡಿದ ಪುಸ್ತಕಗಳನ್ನು ವಿಶ್ವಸಂಸ್ಥೆಗೆ ಕಳುಹಿಸಬಹುದು. ಅಲ್ಲಿ ಆಯ್ಕೆಯಾದ ಸೇವಾ ಯೋಜನೆಗೆ ಪುರಸ್ಕಾರವನ್ನು ಪಡೆಯಲಾಗುತ್ತಿದೆ. ಪ್ರತಿವರ್ಷ ಈ ಪುರಸ್ಕಾರಕ್ಕಾಗಿ ಅರ್ಜಿಗಳನ್ನು ಗೈಡ್ಸ್‌ಗಳು ಸಲ್ಲಿಸುತ್ತಾರೆ. ಇದೊಂದು ಯುವಜನಾಂಗವನ್ನು ಅಂತರರಾಷ್ಟ್ರೀಯ ಮಟ್ಟದಲ್ಲಿ ಸೇವೆಯಲ್ಲಿ ತೊಡಗಿಸಲು ಪ್ರೋತ್ಸಾಹಿಸುವ ಪುರಸ್ಕಾರವಾಗಿದೆ.

**ಸೇವೆಗಳ ಆಯ್ಕೆಪಟ್ಟಿ ಇಂತಿದೆ.**

ಸಾಕ್ಷಾತ್ಕಾರ

ಪರಿಸರ ಸಂರಕ್ಷಣೆ

ಮಾಲಿನ್ಯ ನಿಯಂತ್ರಣ

ಆರೋಗ್ಯ ಶಿಬಿರ

ಮೂಲಭೂತ ಸೌಲಭ್ಯಗಳಾದ ರಸ್ತೆ. ನೀರು ಸರಬರಾಜು

ಅನಾಥಾಲಯ/ ವೃದ್ಧಾಶ್ರಮ ಸೇವೆ

ಪ್ರಕೃತಿ ವಿಕೋಪದ ಸೇವೆ.

ಜಾತ್ರೆ ಮೇಳಗಳಲ್ಲಿ ಸೇವೆ

ನೈರ್ಮಲ್ಯೀಕರಣ

ಔಷಧಿ ಮತ್ತು ಬಟ್ಟೆ ಸಂಗ್ರಹ ಹಂಚಿಕೆ

ಜನಸಂಖ್ಯಾ ಶಿಕ್ಷಣ

ಅಂಗವಿಕಲರಿಗೆ ಸಹಾಯ

ಕುಟುಂಬ ಶಿಕ್ಷಣ

ಹಸಿವಿಗೆ ಪರಿಹಾರ

ಶಿಬಿರ ಕರಕೌಶಲ

ಹೆಣ್ಣುಮಕ್ಕಳ ಶಿಕ್ಷಣ–ವೃತ್ತಿ

ಹೆಣ್ಣು ಮಗುವಿನ ಉಳಿವು

ಉದ್ಯೋಗ ಮಾಹಿತಿ, ಮಾರ್ಗದರ್ಶನ



# ಸ್ಮೃತಿ : 15

## ಲೇಡಿ ಅಲೇವ್ ಬಿ.ಪಿ.ಯವರ ಚಿನ್ನುಡಿ

ಮಗುವಿಗೆ ಬೇಕಾದ ಎಲ್ಲಾ ಕಾರ್ಯಕ್ರಮಗಳನ್ನು ಚಟುವಟಿಕೆಗಳನ್ನು ಸ್ಕೌಟಿಂಗ್ – ಗೈಡಿಂಗ್ ನೀಡುತ್ತದೆ ಮತ್ತು ಮಕ್ಕಳಿರುವವರೆಗೂ ಸ್ಕೌಟಿಂಗ್– ಗೈಡಿಂಗ್ ಮುನ್ನಡೆಯುತ್ತದೆ.

"ವಿಶ್ವವನ್ನು ನಾವು ಕಂಡಿದ್ದಕ್ಕಿಂತಲೂ ಉತ್ತಮಗೊಳಿಸಿ ಹೋಗಲು ಬಂದಿದ್ದೇವೆ" ಎಂದು ನಾನು ನಂಬುತ್ತೇನೆ.

ನಾನು ನನ್ನನ್ನು ಅಸಾರ್ಥಕಳೆಂದು ಭಾವಿಸುತ್ತೇನೆ, ಆದರೆ ನನ್ನ ಕೈಲಾದಷ್ಟು ಉತ್ತಮ ಕೆಲಸ ಮಾಡುತ್ತೇನೆ. ಗೈಡಿಂಗ್ ಯಾವ ದೇಶದಲ್ಲಿದ್ದರೂ, ಎಲ್ಲಿದ್ದರೂ ನಾನು ಅದನ್ನು ಪ್ರೀತಿಸುತ್ತೇನೆ.

**– ಜುಲೈ 1930 ವಿಶ್ವ ಪ್ರಧಾನ ಗೈಡ್ ಆದಾಗ**

ಅವರ (ಅಲೇವ್) ಧ್ವನಿ ಪ್ರಬಲವಾಗಿತ್ತು, ಬರಿಯ ಜೋರಾಗಿರಲಿಲ್ಲ ಅವರ ಧ್ವನಿ ನಾಯಕಿಯ ಧ್ವನಿಯಾಗಿತ್ತು, ಆದರೆ ಸ್ನೇಹಪೂರ್ಣ ನಾಯಕಿಯದಾಗಿತ್ತು, ನಾನು ಅವರನ್ನು ಬಹಳ ಇಷ್ಟಪಟ್ಟೆ – ಬ್ರೌನಿ

ನಾನು ನಿಮಗೆ ಸೇರಿದವಳು, ನೀವು ನನಗೆ ಸೇರಿದವರು. ನಾವೆಲ್ಲರು ಒಟ್ಟಾಗಿ ಈ ಬೃಹತ್ ಗೈಡ್ ವಿಶ್ವಕುಟುಂಬಕ್ಕೆ ಸೇರಿದವರು.

**– 1970 ಗೈಡಿಂಗ್‌ನ ವಜ್ರಮಹೋತ್ಸವ**

ಸಂತಸವು ನಮ್ಮಲ್ಲಿರುವ ವಸ್ತುಗಳಿಂದ ದೊರೆಯುವುದಿಲ್ಲ. ಆದರೆ ನಮ್ಮಲ್ಲಿರುವ ವಸ್ತುಗಳನ್ನು ಕೊಡುವುದರಿಂದ ಮತ್ತು ಹಂಚಿಕೊಳ್ಳುವುದರಿಂದ ದೊರೆಯುತ್ತದೆ.

ನಾವು ಬಹಳ ಸಂತೋಷ ಮತ್ತು ಎಣಿಸಲಾರದಷ್ಟು ಸ್ನೇಹಿತೆಯರನ್ನು ಪಡೆಯುತ್ತೇವೆ. ಕೊಟ್ಟು ಕೊಳ್ಳಲು ನಮ್ಮಲ್ಲಿ ಸಾಕಷ್ಟು ವಿನೋದಗಳಿರುತ್ತವೆ,

## ವಿಶ್ವ ಪ್ರಧಾನ ಗೈಡ್ ಅವರು ಗೈಡ್ಸ್‌ಗಳಿಗೆ ನೀಡಿರುವ ಸವಾಲು !!

ಪರೀಕ್ಷೆ ಪಾಸುಮಾಡಿ ಮತ್ತೊಂದು ಪದಕ ಸೇರಿಸಿಕೊಳ್ಳಿ

ನೂತನ ಪ್ರವೇಶಿಯನ್ನು ಅಷ್ಟಕಕ್ಕೆ ಸೇರಿಸಿ.

ಸ್ಕೌಟರ್ – ಗೈಡರ್ ಅನ್ನು ಸ್ಕೌಟ್–ಗೈಡ್ ಕುಟುಂಬಕ್ಕೆ ಸೇರಿಸಿ

ದಳವನ್ನು ಹೆಚ್ಚಿಸಿ

ದಿನಕ್ಕೊಂದು ಒಳ್ಳೆಯ ಕೆಲಸ ಮಾಡಿ

ಒಳ್ಳೆಯ ಚಿಂತನೆ ಮತ್ತು ಪ್ರಾರ್ಥನೆಯನ್ನು ಸ್ಕೌಟಿಂಗ್–ಗೈಡಿಂಗ್‌ನ್ನು ವಿಶ್ವವ್ಯಾಪಿಯಾಗಿಸಲು ದಿನವೂ ಮಾಡಿ.

ಹಿತೈಷಿಯನ್ನು ಸೇರಿಸಿ

# ಆಧಾರ ಪುಸ್ತಕದಗಳು – Reference Book


1. Window on my heat - Mary Drewery
2. The tree book about girl guiding - Alex Liddell - London
3. WAGGGS -NHQ - New Delhi
4. Opening Door ways - Olave BP
5. World News Letters - WAGGGS London
6. Story of Trefoil - WAGGGS
7. History of Guding
8. ಲೋಕಮಾತೆ ಅಲೇವ್ ಲೇಡಿ ಬೇಡನ್ ಪಾವೆಲ್ – ಮೈಥಿಲಿ ಸಂಪತ್
9. Palmlet - The Olave Baden Powell Society Olave Center - London
10. Olave Baden Powell - Elizabeth




ಸ್ಕೌಟಿಂಗ್ ಫಾರ್ ಬಾಯ್ಸ್ ಮೂಲ ಪುಸ್ತಕದ ಮುಖಪುಟ *(1908)*



ಚಂದ್ರಲೋಕಕ್ಕೆ ಮೊದಲು ಪಾದಾರ್ಪಣೆ ಮಾಡಿದ ಕಮಾಂಡರ್ ನೈಲ್ ಆರ್ಮಸ್ಟ್ರಾಂಗ್ ಸ್ಕೌಟ್ ಆಗಿದ್ದವರು ಚಂದ್ರನ ಮೇಲೆ ಹಾರಿಸಿದ ಸ್ಕೌಟ್ ಬಾವುಟ *(1969)*

## THE LAST MESSAGE OF OLAVE LADY BADEN POWELL

Dear Guides, Scouts and Brownies and all their leaders and friends,

'I shall have left this world when you receive this message, when I have to express my thanks for all the kindness and the affection shown to me, and to say how greatly I have rejoiced over the way in which you have all carried out your share in the work of the Movement that my beloved husband invented, for the advancement of boys and girls of all countries, years ago.

'I have firm belief in Almighty God and in the life in the World to come. When he had and I will be reunited, and together we shall watch over you who have been entitled as members and you well being.

'I trust that you will continue fully to use the system of work and play that our Movement provides, keeping up the fun and the friendship made at your meetings and in camps, abiding by the promise and upholding the Laws that you undertake to live by when you joined up.

'In what way you will not only advance yourself in body, mind and spirit, but you will affect those around you in doing what is honourable and right and wise, and in giving out kindness of thought and action thus striving against all ills and helping to make the world a happier and a better place in which to live.

'I trust that you will be successful in all your tasks, and may God be with you all in the coming years.

- OLAVE BADEN-POWELL

